

ಜಗದ್ಗುರು

-: ಶ್ರೀ ಸಿದ್ಧಲಿಂಗವಿಜಯ :-







# ಪುರಾಣವು



1952

ಬೆಲೆ ೩ ರೂ.

॥ ಓಂ ನಮಃಪಂಚಜಗದ್ಗುರುಭ್ಯಃ ॥




ದ್ವಾದಶರತ್ನಂ

ಜಗದ್ಗುರು

ಶ್ರೀ ಸಿದ್ಧಲಿಂಗವಿಜಯ

# ಪುರಾಣವು.

( ತಾ॥ ೧೬-೧-೧೯೩೮ ಶಕಾಬ್ದ ೧೮೫೯ ಪುಷ್ಯ ಕೃಷ್ಣ ೪ ಯಲ್ಲಿ ಜರುಗಿದ ಉಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು **ಸಿದ್ಧಲಿಂಗಶಿವಾಚಾರ್ಯರ** ೧೬ ನೇ ಪುಣ್ಯತಿಥಿಯ ಸ್ಮಾರಕವು. )

---

ಗ್ರಂಥಕರ್ತೃ ಮತ್ತು ಪ್ರಕಾಶಕರು:-

ಶಿವಾದ್ವೈತ ವಿದ್ಯಾವಿಭೂಷಣ, ಉಭಯಭಾಷಾ ಕವಿಕಂಠೀರವ,

**ಸಾಹಿತ್ಯರತ್ನಂ ಕುಲಪತಿ ವೇ॥ ಪಂ. ಜಗದೀಶಶಾಸ್ತ್ರಿಗಳು ನಾಲ್ವಾರ**

ಪ್ರಧಾನಾಧ್ಯಾಪಕ ಶ್ರೀಮದ್ವೀರಶೈವ ಗುರುಕುಲ, **ಸೋಲಾಪೂರ.**

---



( ಪ್ರಥಮಾವೃತ್ತಿ ೫೦೦ ಪ್ರತಿಗಳು ]॥[ ಶಕೆ ೧೮೬೪ ಸನ್ ೧೯೩೮ ಜೂನ್. )



ಶ್ರೀ ಬಾಲತಪಸ್ವಿ
ಹುಟಗಿ ಶ್ರೀಗಳು.

ಧರ್ಮವೀರ ಶರಣಪ್ಪಣ್ಣಾ
ಫತ್ತೇಪೂರ ದುಬಲಗುಂಡಿ.

I

—॥ ಓಂ ನಮಃಪಂಚಜಗದ್ಗುರುಭ್ಯಃ ॥—

ಶ್ರೀ ಗಿರಿರಾಜ ಶ್ರೀಶೈಲ ಸೂರ್ಯಸಿಂಹಾಸನಾಧೀಶ

**ಶ್ರೀ ಜಗದ್ಗುರು ವಾಗೀಶಪಂಡಿತಾರಾಧ್ಯ ಮಹಾಸ್ವಾಮಿಗಳವರ**

# ... ಮುನ್ನುಡಿ ...

ಶ್ರೀ ಸಿದ್ಧಲಿಂಗ ವಿಜಯ ಪುರಾಣಕ್ಕೆ ಮುನ್ನುಡಿಯನ್ನು ಬರೆಯಲು ಉಭಯಭಾಷಾ ಕವಿಕಂಠೀರವರೂ, ಕುಲಪತಿಗಳೂ ಆಗಿರುವ ವೇ|| ಪಂ|| **ಜಗದೀಶಶಾಸ್ತ್ರಿಗಳವರು** ಬಹುದಿನಗಳ ಹಿಂದೆಯೇ ನಮ್ಮನ್ನು ಕೋರಿದ್ದರು.

ಯಜಮಾನರು ಯಾವ ಶಕ್ತಿಯನ್ನು ಕಂಡು ನಮ್ಮನ್ನು ಈ ಕಾರ್ಯದಲ್ಲಿಳಿಸಿರುವರೋ ತಕ್ಕಮಟ್ಟಿಗಾದರೂ ನಾವದನ್ನು ಕೊನೆಗಾಣಿಸಬೇಕಾಗಿದೆ.

ಈ ಕಾವ್ಯ ಕಬ್ಬುಸಕ್ಕರೆಯಂತೆ ಸರಸರ ಕರಗಿ ಸರಸವಾಗಿ ರಸದಲ್ಲಿ ಸೇರಿಬಿಡುತ್ತದೆ. ಕೆಲವುಕಡೆ ಅಚ್ಚಗನ್ನಡಿಗನ ಕುಚ್ಚು ಬಿಡಿಸಬಲ್ಲ ಕೆಚ್ಚಾದ ಶಬ್ದಗಳೂ ಇದರಲ್ಲಿ ಬಂದಿವೆ. ಸರಣಿ ಗಂಗಾಪ್ರವಾಹದಂತೆ ತಡೆಯಿಲ್ಲದೆ ಸಾಗಿದೆ. ಪ್ರಾಸಗಳು ಯಾವ ತ್ರಾಸವನ್ನೂ ಹೊಂದದೆ ಸ್ವಾಭಾವಿಕವಾಗಿ ಬಂದಿವೆ. ಉಪಮಾದ್ಯಲಂಕಾರಗಳು ಕಾವ್ಯದ ಸರ್ವಾಂಗಗಳಲ್ಲಿಯೂ ಪುಷ್ಟವಾಗಿವೆ. ದೇವಮಂದಿರದ ದಾಸಿಯಂತೆ ಯಾವ ರಸಗಳೂ ಮೇರೆದಪ್ಪಿಲ್ಲ.

ಜನಸಾಮಾನ್ಯಕ್ಕೆ ಬೇಕಾದ ನೀತಿಯು ಹೆಜ್ಜೆಹೆಜ್ಜೆಗೂ ತುಂಬಿತುಳುಕುತ್ತದೆ. ಎಷ್ಟೋಕಡೆಯಲ್ಲಿ ದಾರಿತಪ್ಪಿದವರನ್ನು ದಾರಿಗೆ ತರುವ ಬೋಧೆಯು ಮನಸ್ಸಿಗೆ ಅಂಟುವಂತಿದೆ.

ಆಳಿಬಾಳಿದ ಮುದಿ ಸಾಹಿತಿಯ ಅನುಭವವು ಅಭ್ಯಾಸಿಗಳಿಗೆ ನಿಜವಾಗಿಯೂ ಮೃದುಮಧುರವಾದ ಮಧುವಿನಂತಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಧರ್ಮದೃಷ್ಟಿಯಿಂದ ನೋಡಹೋದರೆ ಎಲ್ಲಿಯವರೆಗೆ ಬೇಕಾದರೂ ಅನುಭವ ಹೊಂದಬಹುದು. ಲೌಕಿಕವೆಂದರೆ ಸ್ತ್ರೀಪುರುಷರೀರ್ವರಿಗೂ ಆಯುಷ್ಯದಲ್ಲಿ ಬೇಕಾಗುವ ಎಲ್ಲ ಅನುಭವವನ್ನು ಹೊಂದುವಂತಿದೆ. ಮತ್ತೆ ಪಾರಮಾರ್ಥವೆಂದರೆ ಅದರಲ್ಲೂ ಎತ್ತಿದ ಕೈ, ಈ ಪಂಡಿತರದು.

ಶಾಸ್ತ್ರಾಧಾರಗಳನ್ನು ಛಂದಸ್ಸು ಕೆಡದಂತೆ ಹೆಣೆದಿರುವದು ಪಾಲ್ಕುರಿಕೆ ಸೋಮನಾಥ ಕವಿಯ "ಪಂಡಿತಾರಾಧ್ಯ ಚರಿತೆ" ಯನ್ನು ಜ್ಞಾಪಕಕ್ಕೆ ತರುತ್ತದೆ.

ಈ ಕವಿಗಳು ಮಹಾರಾಷ್ಟ್ರ ಕರ್ನಾಟಕ ಸಂಮಿಶ್ರಣವಾದ ಸೊಲ್ಲಾಪುರ ದಲ್ಲಿದ್ದರೂ ತಮ್ಮ ಅಚ್ಚ ಕನ್ನಡತನವನ್ನು ಕಾಪಾಡಿಕೊಂಡು ಕನ್ನಡ ಪುರಾಣ ವನ್ನು ನಿರರ್ಗಳವಾದ ಶೈಲಿಯಲ್ಲಿ ರಚಿಸಿರುವುದು ಎಲ್ಲ ಕನ್ನಡಿಗರಿಗೂ ಹೆಮ್ಮೆ ಯನ್ನುಂಟುಮಾಡುವಂತಿದೆ.

ಮಾನವಕುಲೋದ್ಧಾರಕ್ಕಾಗಿಯೇ ತಮ್ಮ ಜೀವಿತವನ್ನು ಮುಡುಪಾ ಗಿಟ್ಟ ಮಹಾತ್ಮರಲ್ಲಿ ಶ್ರೀ ಸಿದ್ಧಲಿಂಗಶಿವಯೋಗಿಗಳೊಬ್ಬರು. ಇಂತಹ ಮಹಿ ಮರ ಚರಿತ್ರಗಳೆಷ್ಟು ಹೊರಬಿದ್ದರೂ ಜಗತ್ತಿಗೆ ಮೋಕ್ಷವೇ ಆಗುವದು. ಸರ್ವ ಜೀವಿಗಳನ್ನು ಸಮಾನ ದೃಷ್ಟಿಯಿಂದ ಕಂಡು ಉದ್ಧಾರಮಾಡಿದ ಶ್ರೀ ಜಗದ್ ಗುರು ರೇಣುಕಾದಿ ಪಂಚಾಚಾರ್ಯರೂ, ಶ್ರೀ ಬಸವಣ್ಣ ಮೊದಲಾದ ಶಿವಶರ- ಣರೂ, ಅಕ್ಕಮಹಾದೇವಿ, ಮಲ್ಲಮ್ಮ ಮೊದಲಾದ ಶಿವಶರಣೆಯರೂ ಎಷ್ಟೋ ಹಳಬರಾದರೂ ಅವರ ವಿಶಾಲವಾದ ಚರಿತ್ರೆಯಿಂದ ಪ್ರಪಂಚಕ್ಕೆ ಹೊಸಹೊಸಬ ರಾಗಿಯೇ ಕಾಣುತ್ತಾರೆ. ಚರಿತ್ರೆಯನ್ನು ಬರೆದಿಡುವದು ಇದಕ್ಕಾಗಿಯೇ ಎಂಬು ದನ್ನು ಕವಿ ಪಂಡಿತರು ಮರೆಯಬಾರದು. ಅಂಥಹ ಕಾರ್ಯವನ್ನು ಹೊಟಗಿ ಬೃಹನ್ಮಠಾಧೀಶ ಬಾಲಶಿವಯೋಗಿ **ಷ. ಬ್ರ. ಚನ್ನವೀರಶಿವಾಚಾರ್ಯ ಮಹಾ ಸ್ವಾಮಿಗಳವರ** ಉದಾರಾಶ್ರಯದಲ್ಲಿ **ಪಂ॥ ಜಗದೀಶಶಾಸ್ತ್ರಿಗಳವರು** ಮಾಡಿ ಧನ್ಯರಾಗಿದ್ದಾರೆ.

ಸತ್ಪುರುಷನ ಈ ದಿವ್ಯ ಚರಿತ್ರೆಯು ಎಲ್ಲರನ್ನೂ ಪಾವನಗೊಳಿಸಲಿ. ಪಂಡಿತರಿಗೆ ಇಂತಹ ಇನ್ನೂ ಅನೇಕ ಕಾವ್ಯಗಳನ್ನು ಬರೆಯುವ ಸ್ಫೂರ್ತಿಯನ್ನು ಶ್ರೀ ಮಲ್ಲೇಶ್ವರನು ಕರುಣಿಸಲಿ.

ಈಗಿನ ಯೋಗೀಶ್ವರರ ಮಾಲೆಯಲ್ಲಿ ಒಬ್ಬರಾಗಿರುವ ಹೊಟಗಿ ಶಿವ- ಯೋಗಿಗಳವರಿಗೆ ಜಗದುದ್ಧಾರಕ್ಕಾಗಿ ಪರಶಿವನು ಪರಮಾಯುಷ್ಯವನ್ನು ಅನು ಗ್ರಹಿಸಲಿ.

—‡( ಶಿವಂ )‡—

**ಮು॥ ಸೂರ್ಯಸಿಂಹಾಸನಮಠ ಆತ್ಮಕೂರು.**

ತಾ॥ ೨೭ । ೬ । ೧೯೫೧

# ಪ್ರಸ್ತಾವನಾ

ಸೊನ್ನಲಾಪುರದ ಶ್ರೀಮದ್ವೀರಶೈವ ಗುರುಕುಲದ ಕುಲಪತಿಗಳಾದ **ಶ್ರೀ ಜಗದೀಶಶಾಸ್ತ್ರಿಗಳು ನಾಲವಾರ** ಇವರು ರಚಿಸಿದ ಕೃತಿ **ಶ್ರೀ ಸಿದ್ಧಲಿಂಗವಿಜಯ ಪುರಾಣಕ್ಕೆ** ಪ್ರಸ್ತಾವನಾ ರೂಪವಾಗಿ ನಾಲ್ಕು ಮಾತುಗಳನ್ನು ಬರೆಯಬೇಕೆಂದು ಅವರಂಥಹ ಜ್ಞಾನವೃದ್ಧರು ವಿಜ್ಞಾಪನಾ ರೂಪವಾಗಿ ಹೇಳಿರುವಾಗ ನಾನು ಅದೊಂದು ಆಜ್ಞೆಯೆಂದೇ ಬಗೆದು ಈ ಲೇಖ ಬರೆಯುತ್ತಿದ್ದೇನೆ. ಕವಿತಾಸೇವೆಯನ್ನು ನಾನೂ ಮಾಡಿರುವೆನಾದರೂ ಈ ಕಾವ್ಯದ ಜಾತಿ ರೀತಿ ಬೇರೆ. ಅಂಥ ಪುರಾಣಕಾವ್ಯದ ಪಾಠ ಅಲ್ಪ-ಸ್ವಲ್ಪವಾಗಿ ನಾನು ಹೇಳಿದ್ದೇನೆ ಅದೇ ಬಲದಿಂದ ಈ ಕಾವ್ಯದಲ್ಲಿ ಪ್ರವೃತ್ತನಾಗಿದ್ದೇನೆ.

ಪುರಾಣಕಾವ್ಯದ ವಿಷಯವಾಗಿ ಹೇಳುವದೇ ಆದರೆ, ಕಾವ್ಯನಾಯಕ, ಅವನ ಮತ ಸಮಯ, ಕವಿಯ ಅಧಿಕಾರ, ಶೈಲಿಯ ದೇಶಿ ಇವೇ ಮೊದಲಾದವುಗಳನ್ನು ಕುರಿತು ಹೇಳುವದೇ ಲೇಸು. ಕಾವ್ಯನಾಯಕನಾದ ಶ್ರೀ ಸಿದ್ಧಲಿಂಗೇಶನು ಖ್ಯಾತ ಮಹಿಮನು, ಅಂಥವರ ಕೀರ್ತಿಯು ಲೇಖನೆಗಳಿಂದ ಹೆಚ್ಚುಕಡಿಮೆಯಾಗುವದಿಲ್ಲ. ಅವರ ಚರಿತೆಯನ್ನು ಹೇಳುವ ಎಂಥ ಗದ್ಯವು ಚಾರಿತ್ರಿಕ ಮಹಿಮೆಯಿಂದ ಗೌರವವನ್ನು ತಾಳುತ್ತದೆ. ಅದನ್ನು ಕವಿಗಳು ಆಯಿದುದು ಕಾಲೋಚಿತವಾಗಿದೆ. ಅಷ್ಟೇ ಅಲ್ಲ ಇವರ ಸುಲಭವರ್ಣನಾಶೈಲಿಯಿಂದ ಕಥಾವೃತ್ತಕ್ಕೆ ಕಾವ್ಯದ ಪಪ್ಪ ಬಂದಿದೆ ಎಂಬುದನ್ನು ವಾಚಕರು ಮನಗಾಣಬಹುದು.

ಕವಿಗಳೋ ಐವತ್ತು ವರ್ಷಕ್ಕೆ ಮಿಕ್ಕಿ ವಿದ್ಯಾದಾನಮಾಡುವ ಸತ್ಕರ್ಮದಲ್ಲಿ ನಿರತರಾದವರು, ಅವರ ಶಿಷ್ಯಮಂಡಳಿಯಲ್ಲನೇಕರು ಇಂದು ವೀರಶೈವ ಗುರುಪೀಠಗಳನ್ನಲಂಕರಿಸಿರುವರು. ಅಂದಮೇಲೆ ವೀರಶೈವ ಮತಸಮಯವನ್ನು ಕುರಿತು ವಚನಿಸಲು ಅವರಲ್ಲದೆ ಅಧಿಕಾರಿಗಳಾರು ? ಮೂರನೆಯ ಸಂಧಿಯಲ್ಲಿ ಬರುವ ತತ್ತ್ವನಿರೂಪಣೆಯು ಅವರ ಪಾಂಡಿತ್ಯಕ್ಕನುರೂಪವಾಗಿದೆ. ಶ್ರೀ ಜಗದೀಶಶಾಸ್ತ್ರಿಗಳ ಪಾಠಪ್ರವಚನಗಳಿಗೆ ಸಂಸ್ಕೃತವೆ ಮೂಲವಾದರೂ ಅವರು ತಮ್ಮ ಮಾತೃಭಾಷೆಯಲ್ಲಿ ರಚಿಸಿರುವ ಈ ಕಾವ್ಯವು ಅವರ ಭಾಷಾಪ್ರಭುತ್ವಕ್ಕೆ ಸಾಕ್ಷಿಯಾಗುವದಿರಲಿ, ಅವರ ಭಾಷಾಪ್ರೇಮನನ್ನೂ ವ್ಯಕ್ತಗೊಳಿಸುವದು. ಪ್ರಜ್ಞೆಯು ಪರಿಣತವಾದ ಈ ವಯಸ್ಸಿಗೆ ಅವರು ನಮ್ಮ ದೇಶಭಾಷಾಸೇವೆಯಿಂದ ಗಡಿನಾಡಿನ ಜೀವಕಳೆಯನ್ನು ಪುಟಗೊಳಿಸಿರುವದು. ದೇಶದ ಭವಿಷ್ಯದ ಶುಭಸೂಚನೆಯೆಂದು ನಾನು ತಿಳಿಯುತ್ತೇನೆ.

ವರ್ಣಕ ಪುರಾಣ ಕಾವ್ಯಪದ್ಧತಿಯು ವೀರಶೈವ ಕವಿಗಳ ವಿಶೇಷ

ಸ್ವತ್ತಾಗಿರುವ ಸಂಗತಿಯು ಸಾಹಿತ್ಯೇತಿಹಾಸಜ್ಞರಿಗೆ ತಿಳಿದ ವಿಷಯ. ಕೀರ್ತಿಶಾಲಿಗಳಾದ ಬಸವಪ್ಪಶಾಸ್ತ್ರಿಗಳಿಂದ ದ್ಯಾಂಪುರದ ಚನ್ನಕವಿಗಳವರಿಗೂ ವರ್ತಮಾನಕಾಲದಲ್ಲಿಯೂ ಆ ಪ್ರವಾಹ ಹರಿಗಡಿದಿಲ್ಲ. ಅದನ್ನು ಶಾಸ್ತ್ರಿಗಳು ತಮ್ಮ ಕಾವ್ಯವಾಹಿನಿಯಿಂದ ಪುಷ್ಟಿಗೊಳಿಸಿದ್ದಾರೆ. ಅವರ ಶೈಲಿಯು ಪುರಾಣ ರೀತಿಯನ್ನನುಸರಿಸಿದರೂ ಅದರಲ್ಲಿ ಆಧುನಿಕತೆಯಿದೆ. ಅದು ಸ್ವಾಭಾವಿಕವೂ ಆಗಿದೆ. ಚಾರಿತ್ರಿಕವಾದ ಈ ಪುರಾಣವು ವಿಶೇಷವಾಗಿ ವೀರಶೈವ ಜನತೆಯಲ್ಲಿ ಶ್ರದ್ಧಾ ಭಕ್ತಿ ಉತ್ಸಾಹಗಳನ್ನು ತುಂಬುವದೆಂದು ನಂಬಿರುವೆನು.

ಈ ಕಾವ್ಯದ ಅನೇಕ ಭಾಗಗಳನ್ನು ನಾನು ಓದಿದ್ದೇನೆ. ಶ್ರುತಿ, ಧ್ರುವ ಈ ಬಗೆಯ ಅತಿ ಸಾಮಾನ್ಯವಾದ ಮುದ್ರಣದೋಷಗಳಲ್ಲದೆ ಅಲ್ಲಲ್ಲಿ ಬೇರೆ ಮುದ್ರಣದೋಷಗಳೂ ಇಲ್ಲಿ ಕಂಡವು, ಅವು ಮುಂದಿನ ಮುದ್ರಣದಲ್ಲಿ ಸರಿಹೋಗುವವೆಂದು ನಾನು ಆಶಿಸುತ್ತೇನೆ. ಲೋಕದ ರುಚಿಯು ಭಿನ್ನ ಭಿನ್ನವಾಗಿದೆ. ಕವಿಗಳು ಪುರಾಣ ಹೇಳುವ ರೂಢಿಯಿಟ್ಟುಕೊಂಡಿದ್ದರೆ ಇಲ್ಲಿಯ ಛಂದೋಲಯವು ಬೇರೆಯಾಗಬಹುದಾಗಿತ್ತೇನೋ! ಎಂಥ ಗದ್ಯವನ್ನೂ ಒಂದುಬಗೆಯ ರಾಗದಿಂದ ಹೇಳಲು ಶಕ್ತರಾದ ಗಮಕಿಗಳಿರುವ ಸದ್ಯಃ ಕಾಲದಲ್ಲಿ ಇಲ್ಲಿಯ ಲಘುಪದ ಗುಂಫನವು ಅಷ್ಟು ಅಡ್ಡಿ ಬರಲಿಕ್ಕಿಲ್ಲವೇನೋ ಎಂದು ನನ್ನ ತರ್ಕ. ಷಷ್ಠಿಯ ಅಕಾರ ಷಟ್ಪದಿಯ ತೃತೀಯ ಚರಣಾಂತ್ಯದಲ್ಲಿ ಛಾಂದಸಿಕವಾಗಿ ದೀರ್ಘವಾಗುವ 'ಅ, ಕಾರ ತಾಲಸ್ಥಲದಲ್ಲಿ ತೊಡಕಾಗುವಂತೆ ಪದಚ್ಛೇದ ಮಾಡಬೇಕಾಗಿ ಬರುವ ಅನಿವಾರ್ಯ ಇವೇ ಮೊದಲಾದ ಕೆಲವು ಲಕ್ಷಣಗಳು, ಕೆಲವು ಹಳೆಯ ಪುರಾಣ ಕಾವ್ಯಗಳಲ್ಲಿಯೂ ಆಗಾಗ ತಲೆದೋರಿವೆ. ಆ ಪರಂಪರೆಯನ್ನುವಂತೆ ಅವು ಈ ಕಾವ್ಯದಲ್ಲಿ ಅಲ್ಲಲ್ಲಿ ಇದಿರಾಗುವವು, ಈ ಮಾತು ಕವಿಗಳಿಗೂ ಗೊತ್ತು.

ಇಲ್ಲಿಯ ಅನೇಕ ವರ್ಣನೆಗಳು ಪುರಾಣ ಕಾವ್ಯಸಮಯಗಳನ್ನು ಶೈಲಿಯನ್ನೂ ಪದಸಮುದಾಯವನ್ನೂ ನೆನೆವಿಗೆ ತಂದು, ಒಮ್ಮೊಮ್ಮೆ ನಾವು ಹಳೆಯ ಕಾವ್ಯವನ್ನೇ ಓದುವೆವೆಂಬ ಭ್ರಾಂತಿಗೀಡುಮಾಡುವವು. ಇದು ಕಾವ್ಯದ ಉತ್ತಮಿಕೆಯ ಕುರುಹು, ಗಾತ್ರದಲ್ಲಿ ಈ ಪುರಾಣವು ಮಹತ್ತನ್ನು ಪಡೆಯದಿದ್ದರೂ ಕಾವ್ಯನಾಯಕನ ಮಹಿಮೆಯಿಂದ ಶೈಲಿಯಿಂದ ಮಹತ್ವವನ್ನು ಪಡೆಯದಿರಲಾರದೆಂಬುದು ನಿಸ್ಸಂಶಯವಾದ ಮಾತು.

**ಪ್ರೊಫೆಸರ್ ದ. ರಾ. ಬೇಂದ್ರೆ** M A.

ತಾ|| ೩೧-೧೨-೧೯೫೧ } ಕನ್ನಡದ ಪ್ರಾಧ್ಯಾಪಕರು ದಯಾನಂದ ಆಂಗ್ಲ ವೈದಿಕ ಸೊಸಾಯಿಟಿ ಕಲಾಶಾಲೆ ಸೊಲ್ಲಾಪುರ.

॥ ಓಂ ನಮಃಪಂಚ ಜಗದ್ಗುರುಭ್ಯಃ ॥



—: ಗ್ರಂಥಕರ್ತರು :—

ಉಭಯಭಾಷಾ ಕವಿಕಂಠೀರವ, ಸಾಹಿತ್ಯರತ್ನಂ, ಕುಲಪತಿ,

**ವೇ॥ ಪಂ॥ ಜಗದೀಶ ಶಾಸ್ತ್ರಿಗಳು ನಾಲ್ವಾರ.**

ಪ್ರಧಾನಾಧ್ಯಾಪಕರು.

ಶ್ರೀಮದ್ವೀರಶೈವ ಗುರುಕುಲ, ಸೋಲಾಪೂರ.



V

# ಗ್ರಂಥಕರ್ತೃವಿನೆರಡು ಶಬ್ದಗಳು

ಶ್ರೀ ಪರಶಿವನಿಂದುಕ್ತಗಳಾದ ಕಾಮಿಕ ಮೊದಲು ವಾತುಲ ಕಡೆಯಾದ ಇಪ್ಪತ್ತೆಂಟು ದಿವ್ಯಶೈವಾಗಮಗಳ ಅಂತ್ಯದಲ್ಲಿ ಪ್ರತಿಪಾದಿತವಾದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಸಂಸ್ಥೂತ ವೀರಶೈವಮಹಾಮತಸ್ಥಾಪಕರೆಂದು ಶಾಸ್ತ್ರ ಮತ್ತು ಲೋಕ ವಿಖ್ಯಾತರಾದ ಶ್ರೀ ರೇವಣಸಿದ್ಧಾದಿ ಪಂಚಜಗದ್ಗುರು ಭಗವತ್ಪಾದರ,ರಂಭಾಪುರೀ ವೀರಪೀಠ ಮೊದಲಾದ ಪಂಚಮಹಾಪೀಠಗಳಲ್ಲೊಂದಾದ ಉಜ್ಜಯಿನೀ ಸದ್ಧರ್ಮ ಸಿಂಹಾಸನದ ಅಧೀಶರಾದ ಶ್ರೀ ಜಗದ್ಗುರು ಮರುಲಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳ ಪರಂಪರಾಗತರೂ, ಪಾವನ ಚರಿತರೂ, ಅಸಾಧಾರಣ ಬ್ರಹ್ಮಚರ್ಯಾ ಅನಿತರ ಸಾಧ್ಯತಪಶ್ಶಕ್ತಿ, ಅನುಪಮಕ್ರಿಯಾಸಿದ್ಧಿ, ಶೈವೀಕಲಾ ಮೊದಲಾದ ಲೋಕಾಸಾಮಾನ್ಯ ಧರ್ಮಗಳ ಆಶ್ರಯರೂ ಆದ ಶ್ರೀ. ಜ. **ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು** ಚರಿತ್ರನಾಯಕರಾಗಿರುವರು.

ಇವರು ಕನ್ನಡ ನಾಡಾದ ಮೈಸೂರು ಇಲಾಖಾ, ಚಿತ್ರದುರ್ಗ ಜಿಲ್ಲಾ ಜಗಲೂರು ತಾಲೂಕಿಗೆ ಸೇರಿದ " **ಬಂಗಾರನಾಯಕನಹಳ್ಳಿ** " ಎಂಬ ಚಿಕ್ಕ ಊರಲ್ಲಿ ಹಿರೇಮಠದವರೂ, ಸದ್ವಂಶರೂ, ಶ್ರೀ ದಾರುಕಶಾಖಾನುವರ್ತಿಗಳೂ, ಆದ **ವೇ. ಚನ್ನಬಸವಾರ್ಯರಿಂದ ಗುರುಸಿದ್ಧಾಂಬಾ,** ಎಂಬುವ ಸಾಧ್ವೀ-ಮಣಿಯ ಗರ್ಭಾಂಬುಧಿಯಲ್ಲಿ ರಾಕಾಚಂದ್ರನಂತೆ ಶಾಲಿವಾಹನ ಶಕೆ ೧೮೧೧ ವಿಕೃತಿ ಸಂವತ್ಸರ ಮಾಘಕೃಷ್ಣ ಸಪ್ತಮೀ ಭಾನುವಾರದಲ್ಲಿ ಜನಿಸಿದರು, ' **ಸಿದ್ಧಲಿಂಗಾರ್ಯ** , ನೆಂಬ ನಾಮವನಾಂತರು. " ಶೈಶವೇಭ್ಯಸ್ತವಿದ್ಯಃ " ಎಂಬುವಂತೆ ಕಾಲೋಚಿತ ವಿದ್ಯೆಯನ್ನು ಪೂರೈಸಿದರು.

ಮುಂದೆ ಅಲ್ಲಿಗೆ ಶಿಷ್ಯವೃತ್ತಿಗಾಗಿ ದಯಮಾಡಿಸಿರುವ ಜ. ಉ. ಸ., ಮರುಲಸಿದ್ಧಶಿವಾಚಾರ್ಯರ ಸನ್ನಿಧಿಗೆ ದರ್ಶನಾರ್ಥಿಯಾಗಿ ತಂದೆಯಗೂಡ ಬಂದಿರುವ ಎಳೆಹರಿಯದ ಸಿದ್ಧಲಿಂಗನನ್ನು ತಮ್ಮ ಮಠಕ್ಕೆ ಚನ್ನಬಸವಾರ್ಯ ನಿಂದ ತೆಗೆದುಕೊಂಡರು, ಅಲ್ಲಿ ಸಿದ್ಧಲಿಂಗನು ಸಂಸ್ಕೃತ ವಿದ್ಯೆಯನ್ನಭ್ಯಾಸಿಸಿ ದನು. ಇವರು ತಮ್ಮ ನೈಸರ್ಗಿಕಗಳಾದ ವಿನಯ, ಭೂತದಯಾ, ಬ್ರಹ್ಮಚರ್ಯಾ ಮೊದಲಾದ ಸದ್ಗುಣಗಳಿಂದ, ಜ. ಮರುಳಸಿದ್ಧಶಿವಾಚಾರ್ಯರ ಹೃದಯವನ್ನು ಭಕ್ತರ ಹೃದಯಗಳಿಂದ ಕೂಡಿ ಎಳಕೊಂಡರು. ಪರಮಾನಂದತುಂದಿಲರಾದ ಜ. ಮರುಲಸಿದ್ಧಶಿವಾಚಾರ್ಯರು ಶಕೆ ೧೮೨೮ ಪರಾಭವ ವತ್ಸರ ವೈಶಾಖ ಕೃಷ್ಣ ೫

ಭಾನುವಾರ ಉದಯದ ಶುಭಮುಹೂರ್ತದಲ್ಲಿ ಸಿದ್ಧಲಿಂಗಶಿವಾಚಾರ್ಯರಿಗೆ ಜಗದ್ಗುರುತ್ವದ ಪಟ್ಟಾಧಿಕಾರವನ್ನನುಗ್ರಹಿಸಿದರು.

ಇವರು ನಿತ್ಯಾನಿತ್ಯ ವಸ್ತುವಿವೇಕವವ್ಪರರೂ, ಜೀವನ್ಮುಕ್ತರೂ ಆಗಿದ್ದರು. "ಉದ್ಯೋಗವೇಕೋಹಿ ಸಾಧೂನಾಮಾಚಾರೋ ಲೋಕಸಂತತೇಃ" ಎಂಬುವ ಹಿತೋಕ್ತಿಯಂತೆ ಒಡೆಮತೋರುವ ನಯ ಮೊದಲಾದ ಸಾಮಾನ್ಯ ಧರ್ಮದಿಂದಲೂ ಷಟಸ್ಥಲಜ್ಞಾನ ಮೊದಲಾದ ವಿಶೇಷ ಧರ್ಮದಿಂದಲೂ ತುಂಬಿ ತುಳುಕುತ್ತ ಜಗದುದ್ಧಾರಕರಾಗಿದ್ದರು.

ಇಂತಹ ಜಗತ್ಪಾವನ ಚರಿತರಾದ ಜಗದ್ಗುರುಗಳ ಚರಿತವನ್ನು ಪುರಾಣ ಕಾವ್ಯರೂಪದಿಂದ ಬರಿಯಲು, ಧ್ರುವನಂತೆ ಎಳೆಹರಿಯದಲ್ಲಿ ( ೧೪ | ೧೫ ವರ್ಷದ ವಯದಲ್ಲಿ ) ದುಶ್ಚರ ತಪವನ್ನಾಚರಿಸಿ ತದಾದಿ ಈವರೆಗೂ ಪ್ರತಿವರ್ಷ ಆಚರಿಸುತ್ತಿರುವ ಶಿವಮಯ ಶರೀರರೂ, ಮಹಾತಪೋಧನರೂ ಆದ, ಶ್ರೀ. ಷ. ಬ್ರ. ಹೋಟಗಿ ಬೃಹನ್ಮಠಾಧೀಶ ಪಟ್ಟಾಧ್ಯಕ್ಷ **ಶ್ರೀ ಚನ್ನವೀರಶಿವಾಚಾರ್ಯರು** ಒಂದೆರಡು ವರ್ಷಗಳ ಪೂರ್ವ ಒಂದೆರಡುಸಾರಿ ಆಗ್ರಹದಿಂದ ಅಪ್ಪಣೆಕೊಡಿಸಿದರು ನನ್ನಿಂದ ಸಾಧ್ಯವಾಗುವದಿಲ್ಲೆಂದು ಇದ್ದ ಸಂಗತಿಯನ್ನೇ ಅರಿಕೆಮಾಡಿಕೊಂಡಿದ್ದೆನು. ಆದರೂ ಮತ್ತೊಂದುಸಲ ( ಒಂದು ವರ್ಷದ ಮುಂಚೆ ) ಪುರಾಣವನ್ನು ಬರೆಯಿರಿ. ಬಾರದೆಂದು ಜರಿಯಬೇಡಿರಿ. ಆ ಜ. ಸಿದ್ಧಲಿಂಗನು ಅನುಗ್ರಹಿಸುವನೆಂದು ಬಹು ಆಗ್ರಹದಿಂದಲೂ ಕಳಕಳಿಯಿಂದಲೂ ನಿಶ್ಚಯಸ್ವರದಿಂದ ಒತ್ತಿ ಹೇಳಿದರು.

ಆ ಕಾಲದಲ್ಲಿ ಅವರ ಮುಖದಲ್ಲಿ, ಜ. ಗುರುಗಳಲ್ಲಿರುವ ಅತ್ಯುತ್ಕಟ ಭಕ್ತಿರಸವನ್ನು, ಬರೆಸುವವರಲ್ಲಿರುವ ಕಳಕಳಿಯ ಹೆಚ್ಚಳವನ್ನು ಕಂಡು ನನ್ನ ಹೃದಯವು ರೂಪಾಂತರವನ್ನು ಹೊಂದಿತು. ಕೂಡಲೆ ' ತಮ್ಮ ಅನುಗ್ರಹ, ವೆಂದು ಅದನ್ನು ಅಂಗೀಕರಿಸಿದೆನು. ಮತ್ತು ಬರೆಯಲಾರಂಭಿಸಿದೆನು. ಆಗ ಜ. ಸಿದ್ಧ-ಲಿಂಗ ಶ್ರೀಗಳೋ, ಶ್ರೀ ಚನ್ನವೀರ ಶ್ರೀಗಳೋ ಮತ್ತಾರೂ ? ತಿಳಿಯದು. ನನ್ನ ಹೃದಯದಲ್ಲಿದ್ದು ಬರೆಯಲು ನನಗೆ ಪ್ರೇರಣ ಮಾಡಿದಂತಾಯಿತು. ( ಕೈಹಿಡಿದು ಬರಿಸಿದಂತಾಯಿತು. ) ಅಂತೆ ಗುರುಕುಲದ ಅಧ್ಯಾಪಕತನವನ್ನು ಮುದ್ರಿಸುವ ಗ್ರಂಥಗಳ ಪ್ರೂಫು ಪರಿಶೋಧನ ಕಾರ್ಯವನ್ನು ಪೂರೈಸುತ್ತ ೭ | ೮ ತಿಂಗಳಲ್ಲಿ ಈ ಗ್ರಂಥವನ್ನು ಬರೆದು ಪೂರೈಸಿದೆನು.

ಶ್ರೀ ಬಾಲತಪಸ್ವಿ ಕೃಪಾಪೋಷಿತ, ಧರ್ಮವೀರ ದಾನಶೂರ ಶ್ರೀಮಂತ

**ಶರಣಪ್ಪ ಅಣ್ಣ ಪತ್ತಿಪೂರ** ಇವರ ಉದಾರಾಶ್ರಯವಲ್ಲಿ ಪ್ರಸಿದ್ಧವಾಗುವ 'ವೀರಶೈವ ಧರ್ಮವೀರ ಗ್ರಂಥರತ್ನಮಾಲೆಯಲ್ಲಿ, ಶ್ರೀ ಜ. ಸಿದ್ಧಲಿಂಗವಿಜಯ ಪುರಾಣವು ೧೨ ನೇ ರತ್ನವಾಗಿರುವದು. ಮಣಿಮಾಲಿಕೆಯಲ್ಲಿ ಕೌಸ್ತುಭಮಣಿಯು ಸೇರುವದರಿಂದ ಮಾಲೆಗೆ ಬೆಲೆಯು, ಮಣಿಗಳಿಗೆ ಕಾಂತಿಯು ದೊರೆಯುವಂತೆ ಧರ್ಮಗ್ರಂಥ ರತ್ನಮಾಲೆಯಲ್ಲಿ ಜ. ಶ್ರೀ. ಸಿದ್ಧಲಿಂಗವಿಜಯ ಪುರಾಣವು ಪೋಣಿಸಲ್ಪಡುವದರಿಂದ ಗ್ರಂಥರತ್ನಮಾಲೆಗೆ ಗೌರವವುಂಟಾಗಿ ಇತರ ಗ್ರಂಥಗಳು ಅಪೂರ್ವ ಪ್ರಭಾವಪೂರಿತಗಳಾಗಿ ಹೊಳೆಯುವವು. ಇಂತಹ ಮಾಲೆಯನ್ನೆಣಿಸುವರ (ಪಠಿಸುವರ) "ಜಪತೋ ನಾಸ್ತಿಪಾತಕಂ" ಎಂಬುವಂತೆ ಪಾಪನಿವೃತ್ತಿಪೂರ್ವಕ ಆತ್ಮೋನ್ನತಿಯಾಗಿ ಓದುಗರು ನಿತ್ಯಸುಖಕ್ಕೆ ಪಾತ್ರರಾಗುವರು. ಕಥಾನಾಯಕರಾದ ಉ. ಜ. ಮಹಾಸ್ವಾಮಿಗಳು ಮಹಿಮಾಶಾಲಿಗಳಲ್ಲಿ ಅಗ್ರಗಣ್ಯರಿರುವರೆಂಬುವದು ಇದನ್ನು ಆಮೂಲಾಗ್ರ ನೋಡಿದರೆ ತಿಳಿಯದಿರದು. ಓದುಗರರಸರು ಬಹುತಿಯಿಂದ ಈ ಪುರಾಣ ಕಾವ್ಯವನ್ನೋದಿ ಪುನೀತರಾಗಬೇಕೆಂದು ಹಿರೆಯಾಸೆಯು.

ನನ್ನ ಸವಿನಯ ಪ್ರಾರ್ಥನೆಯನ್ನು ಉದಾರಚಿತ್ತಕ್ಕೆ ತಂದು, ರಂಭಾವೀರ ಸಿಂಹಾಸನಾಧೀಶ ಶ್ರೀ ೧೦೦೮ ಜಗದ್ಗುರು ಪ್ರಸನ್ನರೇಣುಕ **ವೀರಗಂಗಾಧರ ಮಹಾರಾಜೇಂದ್ರ ಶಿವಾಚಾರ್ಯರು,** ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು **ವಾಗೀಶ ಶಿವಾಚಾರ್ಯರು,** ಕಾಶೀ ಜ್ಞಾನಸಿಂಹಾಸನಾಧೀಶ ಶ್ರೀ ೧೦೦೮ ಜಗದ್ಗುರು **ವಿಶ್ವೇಶ್ವರಶಿವಾಚಾರ್ಯರು** ಕೃಪಾಪೂರ್ಣ ಹೃದಯರಾಗಿ ಶ್ರೀ ಸಿದ್ಧಲಿಂಗವಿಜಯ ಪುರಾಣದ ಬಗ್ಗೆ ಆಶೀರ್ವಾದ ರೂಪದಿಂದ ತಮ್ಮ ಅಭಿಪ್ರಾಯವನ್ನು ಅಪ್ಪಣೆಕೊಡಿಸಿ ಪುರಾಣ ಕೃತಿಯುವತಿಗೆ ಚಿರಾಯುವನ್ನು ಚಿರಸಾಮಾಂಗಲ್ಯವನ್ನು ದಯಪಾಲಿಸಿರುವರು. ಈ ಶ್ರೀ ಜಗದ್ಗುರುಗಳ ಅಡಿದಾವರೆಗಳ ನಿತ್ಯ ನೆನಹಿನಿಂದ ಕಂಣಡಿಯನಾಗಲು ಬಯಸುವೆನು. ಮತ್ತು ಕನ್ನಡ ಪಂಡಿತ ಮಂಡನರೂ, ಕವಿತಾಕಲಾನಿಧಿಗಳೂ ಸೋಲಾಪುರದ ಆ. ವೈ. ಶಾಲೆಯ ಕನ್ನಡದ ಪ್ರಾಧ್ಯಾಪಕರೂ ಆದ, **ದ.ರಾ. ಬೇಂದ್ರೆ** M.A. ಇವರು ನನ್ನ ಸವಿನಯ ಬೇಡಿಕೆಗೆ ಮನಂ ದಂದು ಪ್ರಸ್ತಾವನಾರೂಪದಿಂದ ಸ್ವಾಭಿಪ್ರಾಯವನ್ನು ನೀಡಿ ಕಾವ್ಯಕಾಮಿನಿಗೊಂದುತರದಂದವನ್ನಿತ್ತಿರುವರು, ಇವರ ಉಪಕೃತಿಯು ಸುಸ್ಮರಣೀಯವಾಗಿದೆ. ಮತ್ತು ಹತ್ತೆಂಟುವರ್ಷಗಳಿಂದಲೂ ವಾರಾಣಸೀ ಜ್ಞಾನಸಿಂಹಾಸನ ವಿರಾಜಿತ ಜಂಗಮವಾಟಿಕಾ ಮಹಾಸಂಸ್ಥಾನ ಮಠದಲ್ಲಿ ಸಂಸ್ಥಾಪಿತವಾಗಿ ಪ್ರಸಿದ್ಧಿಯನ್ನು ಪಡೆದ "ಕಾಶೀ ವೀರಶೈವ ವಿದ್ವತ್ಸಂಘವು" ನನ್ನ ಸವಿನಯ ಬೇಡಿಕೆಯನ್ನು ಚಿತ್ತಕ್ಕೆ ತಂದು ಸದರಿ ಪುರಾಣದ ಬಗ್ಗೆ ತಮ್ಮ

ಸದಭಿಪ್ರಾಯವನ್ನಿತ್ತು ಈ ಪುರಾಣವು ಪುರಾಣವಾಗಿ ಬಾಳಿ ಹೋಳೆಯಲೆಂದು ಹರಸಿದುದನ್ನು ಆ ಸಂಸ್ಥೆಯ ಮಹಾಶಯರನ್ನು ನಾನು ಸದಾ ನೆನಿಸುವೆನು.

ಉಜ್ಜಯನೀ ಮಹಾ ಸಂಸ್ಥಾನ ಏಜಂಟರಾದ **ವೇ. ಶ್ರೀ. ಕೆಂಪಯ್ಯನವರು, ಹುವ್ವಿನಹಡಗಲಿ ಗುಗ್ಗರಿ ಹುಚ್ಚಪ್ಪನವರು,** ಈ ಉಭಯ ಸಹೃದಯರು ಜ. ಸಿದ್ಧಲಿಂಗಶಿವಾಚಾರ್ಯರ ಸತ್ಯಗಳೆನಿಸುವ ವಿಶೇಷ ಕೃತಿಗಳನ್ನು ಸಾಂಗವಾಗಿ ತಿಳಿಯಪಡಿಸಿ ಮತ್ತು ಹಿರೇಹಡಗಲಿ ಪುರಾಣೀಕ ಮಠದ **ಶ್ರೀ. ವೇ. ವಿರುಪಾಕ್ಷಶಾಸ್ತ್ರಿಗಳು** ತಾವು ಬರೆದಿರುವ ಶ್ರೀ ಸಿದ್ಧಲಿಂಗ ವಿಜಯವೆಂಬ ಗದ್ಯ ಗ್ರಂಥವಂ ಕಳುಹಿಸಿ ಇದು ಉಳಿಯಿತೆಂಬುವದು ಉಳಿಯದಂತೆ ಪುರಾಣ ಕಥೆಯನ್ನು ಬಹುಶಃ ಸರ್ವಾವಯವ ಸುಂದರವನ್ನಾಗಿ ಮಾಡಿರುವರು. ಈ ಮಹೋದಯ ತ್ರಯದಲ್ಲಿ ಚಿರಕೃತಜ್ಞನಿರುವೆನು, ಮತ್ತು ವೇ. ಪಂಡಿತಮಂಡನರಾದ ಜಿ. ಎಂ. **ಶ್ರೀ ಗುರುಸಿದ್ಧಶಾಸ್ತ್ರಿಗಳು** ಕಾವ್ಯತೀರ್ಥ ಇವರು ಆದಿದಂತೆ ಯಾವತೊಂದರೆಯಿಲ್ಲದೆ ಶ್ರೀ.ಜ. **ಸಿದ್ಧಲಿಂಗವಿಜಯ ಪುರಾಣವನ್ನು** ಸುಂದರವಾಗಿಯೂ ಶುದ್ಧವಾಗಿಯೂ ಮುದ್ರಿಸಿ ಪೂರ್ತಿಗೊಳಿಸಿ ಓದುಗರ ಕೈಯ್ಯ ಕೈಪಿಡಿಯನ್ನಾಗಿ ಮಾಡಿದ್ದಾರೆ. ಈ ಬಗ್ಗೆ ಇವರ ಉಪಕಾರವನ್ನು ನೆನೆಸುವ.

**....ಗ್ರಂಥಕರ್ತೃವು.**

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥





ಶ್ರೀಮದ್ರಂಭಾಪುರೀ

ವೀರಸಿಂಹಾಸನಾಧೀಶ್ವರ ಶ್ರೀ ೧೧೦ನೆ ಜಗದ್ಗುರು ಪ್ರಸನ್ನರೇಣುಕ

**ವೀರ ಗಂಗಾಧರ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿ ಭಗವತ್ಪಾದರವರ**

## ... ಶು ಭಾ ಶೀ ರ್ವಾ ದಃ ...



ಸೋಲಾಪುರ ಜಿಲ್ಹಾ ಹೊಟಗಿ ಬೃಹನ್ಮಠದ ಪಟ್ಟಾಧ್ಯಕ್ಷ 'ವೀರತಪಸ್ವಿ, **ಷ. ಬ್ರ. ಶ್ರೀ ಚನ್ನವೀರಶಿವಾಚಾರ್ಯ ಸ್ವಾಮಿಗಳವರು** ಬಾಲ್ಯದಿಂದಲೂ ಸಮಾಜೋದ್ಧಾರ ಕಾರ್ಯದಲ್ಲಿ ಸಮಾಸಕ್ತರಾಗಿ ಪ್ರಾಧಾನ್ಯತಃ ಶಿವಪೂಜಾ ತಪೋನುಷ್ಠಾನ, ಪ್ರವಚನ, ಸಭಾಸಮ್ಮೇಲನಾದಿಗಳಿಂದ ಧರ್ಮಜಾಗ್ರತಿಯನ್ನು (ತ್ರಿಕರಣಗಳನ್ನು ದಂಡಿಸಿ) ಮಾಡಿ, ಮಾಡುತ್ತಿರುವರಲ್ಲದೆ ವಿದ್ಯಾರ್ಥಿನಿಲಯ, ಗ್ರಂಥಪ್ರಚಾರಗಳನ್ನು ಸಕ್ರಮವಾಗಿ ಸಾಗಿಸುತ್ತ ಬರುತ್ತಲಿರುವದು ಸರ್ವಗೋಚರವಾಗಿದೆ. ಇವರು ಬಾಲ್ಯದಲ್ಲಿಯೂ ಶಿವಪೂಜಾಲೋಲರಾದುದನ್ನು ಕಂಡು ಪೂರ್ವಾಶ್ರಮದಲ್ಲಿರುವಾಗ ಇಂದಿನ ಶ್ರೀ ರಂಭಾಪುರೀ ಜಗದ್ಗುರುಗಳವರು– "ಬಾಲತಪಸ್ವಿ" ಯೆಂದೂ ಶಿವೈಕ್ಯ ಶ್ರೀ ರಂಭಾಪುರೀ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯರು "ವೀರತಪಸ್ವಿ" ಯೆಂದೂ ಪ್ರಶ

ಸ್ತಿಯನ್ನನುಗ್ರಹಿಸಿದರು. ಈಗ ಆ ಉಭಯ ಪ್ರಶಸ್ತಿ ಯೋಗದಿಂದ "ಬಾಲವೀರತಪಸ್ವಿ" ಯೆಂದು ಪ್ರಸಿದ್ಧರಾಗಿರುವರು.

ಇವರ ಆತ್ಮಬಲಕ್ಕೆ ವಿದ್ಯಾಪ್ರಚಾರ ಗ್ರಂಥಲೇಖನಗಳಿಗೆ ವೇ|| ಪಂ|| "ಸಾಹಿತ್ಯರತ್ನ, ಕುಲಪತಿ" **ಜಗದೀಶಶಾಸ್ತ್ರಿಗಳ** ಹಾರ್ದಿಕ ವಿದ್ವತ್ಸಬಲವೂ ಗ್ರಂಥ ಪ್ರಚಾರಕ್ಕೆ ನಿಜಾಮ ಇಲಾಖಾ ಮುಬಲಗುಂಡಿ ಶ್ರೀಮಾನ್ ಸಾಹುಕಾರ **ಧರ್ಮವೀರ ಶರಣಪ್ಪನವರ** ಸ್ವಾಭಾವಿಕವಾದ ಔದಾರ್ಯಪೂರ್ಣವಾದ ಧನಸಹಾಯವೂ ಇನ್ನಿತರ ಭಕ್ತಾದಿಗಳ ಭಕ್ತಿಪೂರ್ವಕವಾದ ಸೇವಾ ಸಹಾನುಭೂತಿಗಳೂ ಜತೆಗೊಂಡು ಶ್ರೀಗಳ ಕಾರ್ಯಕಲಾಪಗಳು ವಿಸ್ತಾರಗೊಂಡು ಪ್ರಕಾಶಮಾನಗಳಾಗುತ್ತಿರುವದು ಸುಸ್ಪಷ್ಟವಾದ ಸಂಗತಿಯಾಗಿದೆ.

**"ಧರ್ಮವೀರ ಗ್ರಂಥರತ್ನಮಾಲೆ"** ಎಂಬುವದು ಹೋಟಗಿ ಶ್ರೀಗಳವರು ಶ್ರೀಮಾನ್. ಮುಬಲಗುಂಡಿ ಶರಣಪ್ಪನವರ ಧನಸಹಾಯದಿಂದ ಹೊರಡಿಸುತ್ತಿರುವ ಗ್ರಂಥಮಾಲೆಯಾಗಿದೆ. ಈ ಮಾಲಿಕೆಯಲ್ಲಿ ಈಗಾಗಲೇ ಅನೇಕ ಚಿಕ್ಕ ಪುಟ್ಟ ಗ್ರಂಥಗಳು ಮುದ್ರಣಹೊಂದಿ ಹೊರಬಿದ್ದಿವೆ. ಈ ಗ್ರಂಥಮಾಲೆಯಲ್ಲಿ ಕನ್ನಡ, ಮರಾಠಿ, ಸಂಸ್ಕೃತ, ಮೂರು ಭಾಷೆಯ ಗ್ರಂಥಗಳೂ ಹೊರಹೊಮ್ಮುತ್ತವೆ. ಭಾಷಾಂತರಿಸಿದವುಗಳೂ ಉಂಟು. ಇವುಗಳಲ್ಲಿ ಪೌರಾಣಿಕ, ಚಾರಿತ್ರಿಕ, ಆಗಮ, ಪ್ರಬಂಧ ಮುಂತಾದವುಗಳು ಅಂತರ್ಗತಗಳಾಗಿವೆ. ತಾತ್ಪರ್ಯತಃ, ಒಳ್ಳೆಯ ಸಾಹಿತ್ಯವನ್ನು ಯಾವರೀತಿಯಿಂದಲಾದರೂ ಜನಸಾಮಾನ್ಯದಲ್ಲಿ ಬೀರಿ ಜನಜೀವನವನ್ನು ನೀತಿಧರ್ಮಗಳ ಬೀಡನ್ನಾಗಿ ಮಾಡಬೇಕೆಂಬುವದೇ ಶ್ರೀಗಳವರ ಸತ್ಯಸಂಕಲ್ಪವಾಗಿದೆ.

ಶ್ರೀಗಳವರು **"ಸಿದ್ಧಲಿಂಗವಿಜಯ"** ಮಹಾಪುರಾಣವನ್ನು ತಮ್ಮಿಂದ ಸ್ಥಾಪಿತವಾದ ವೀರಶೈವ ಗುರುಕುಲದ ಪ್ರಾಧ್ಯಾಪಕರಾದ ವೇ|| ಪಂ|| ಸಾಹಿತ್ಯರತ್ನ, ಕುಲಪತಿ, ಇತ್ಯಾದಿ ಬಿರುದಾಂಕಿತರಾದ ನಾಲವಾರ **ಜಗದೀಶಶಾಸ್ತ್ರಿ** ಗಳವರಿಂದ ಬರೆಯಿಸಿ ಶ್ರೀ. - ಮಹಾಸನ್ನಿಧಿಯವರ ಅವಲೋಕನ ಅಭಿಪ್ರಾಯಗಳ ಬಗ್ಗೆ ಕಳುಹಿಸಿರುವದು ಮಹಾನಂದ ಹೇತುವಾಗಿದೆ. ಶ್ರೀ ಪುರಾಣವನ್ನು ಆಮೂಲಾಗ್ರವಾಗಿ ಅವಲೋಕಿಸಿದ್ದಾಯಿತು. ಪುರಾಣದ ಸರ್ವತೋಮುಖವಾದ ಮಾಧುರ್ಯವು ಸುಧಾಲಹರಿಯಂತೆ ಯೋಗಿ ಭೋಗಿಗಳೀರ್ವರನ್ನು ಮುಗ್ಧರನ್ನಾಗಿ ಮಾಡುವಂತಹದಾಗಿರುವದಲ್ಲದೆ ಪಂಡಿತಪಾಮರರನ್ನು ತೃಪ್ತಿಗೊಳಿಸತಕ್ಕುದಾಗಿದೆ. ಅಸ್ವಾಭಾವಿಕಗಳಾದ ಸಂಕುಚಿತ ಮೂಲ-

ಕಥಾ ಭಾಗಗಳೊಂದಿಗೆ ಕಲ್ಪನಾ ಕಲ್ಪಲತೆಗಳನ್ನು ಜೋಡಿಸಿ ಕಥಾವಸ್ತುವನ್ನು ಬೃಹದಾಕಾರ ಪರ್ವತಶಿಖರಕ್ಕೇರಿಸಿದಂತಹ ಚರಿತ್ರವಲ್ಲ. ಚರಿತ್ರನಾಯಕರ ಶುದ್ಧ ಸಾತ್ವಿಕ ಸ್ವಾಭಾವಿಕ ಶಾಸ್ತ್ರೀಯ ಜೀವನ ಚರಿತ್ರವನ್ನು ಬರೆಯಿಸುವವರ ಭಕ್ತಿಭಾವದೊಡನೆ ಬೆರಿಸಿ ಸಂದರ್ಭೋಚಿತ ಶಾಸ್ತ್ರಶಿಷ್ಟಾಚಾರ ಸಮ್ಮತಗಳಾದ ಸದ್ವಿಷಯಗಳಿಂದ ಪರಿಪೋಷಗೊಳಿಸಿದ ಮಹಾಕಾವ್ಯವಾಗಿರುವದು.

ಮೊದಲು ಚರಿತ್ರನಾಯಕರ ವಿಚಾರವಾಗಿ ಒಂದೆರಡು ವಾಕ್ಯಗಳನ್ನು ವಿವರಿಸುವದು ಸೂಕ್ತವಾಗಿರುತ್ತದೆ. ಈ ಚರಿತ್ರನಾಯಕರು ಶಿವೈಕ್ಯ ಶ್ರೀ ಜಗದ್ಗುರು **ಸಿದ್ಧಲಿಂಗ ಶಿವಾಚಾರ್ಯರು.** ಇವರು ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ, ವಿಶೇಷಾದ್ವೈತ ಮುಂತಾದ ಪರ್ಯಾಯ ನಾಮರಂಜಿತವಾದ ವೀರಶೈವ ಮಹಾಸಿದ್ಧಾಂತವನ್ನು ಸ್ಥಾಪಿಸಿ, ಜಗದ್ವಿಖ್ಯಾತರಾದ ಅಗಸ್ತ್ಯಾದಿ ಮಹರ್ಷಿ, ರಾಜರ್ಷಿ, ದೇವ, ದಾನವ, ಮಾನವರಿಂದ ಸಂಪೂಜಿತರಾದ ಅನಂತ ಮಹಿಮಾಸ್ಪದರಾದ ಲಿಂಗದಲ್ಲುದಿಸಿ ಲಿಂಗದಲ್ಲಡಗಿದ ಭುವನ ಪ್ರಸಿದ್ಧ ಶ್ರೀ ರೇಣುಕಾದಿ ಪಂಚಾಚಾರ್ಯ ಭಗವತ್ಪಾದರಿಂದ ಸ್ಥಾಪಿಸಲ್ಪಟ್ಟು ಯುಗಯುಗಾಂತರಗಳಿಂದಲೂ ಪರಂಪರಾಗತಗಳಾಗಿ ಬರುತ್ತಿರುವ ಶ್ರೀ ರಂಭಾಪುರೀ ಪ್ರಭೃತಿ ಪಂಚಪೀಠಗಳಲ್ಲೊಂದಾದ ಉಜ್ಜಯಿನೀ ಸದ್ಧರ್ಮ ಸಿಂಹಾಸನಕ್ಕೆ ಅಧಿಪತಿಗಳು ಶ್ರೀ ಜಗದ್ಗುರು ದಾರುಕಾಚಾರ್ಯ ಸಂಪ್ರದಾಯಾನುಗತವಾಗಿ ಜಗದ್ಗುರು ಪಟ್ಟಾಧಿಕಾರವನ್ನು ಹೊಂದಿರುವರು. ಇವರ ಸತ್ವವು ಮಹೋನ್ನತವಾದುದು, ಯೋಗಪ್ರಭೆಯು ವಿಶಾಲವಾದುದು. ತಪಃಸಾಮರ್ಥ್ಯವು ಶಾಪಾನುಗ್ರಹಾದಿ ಕ್ಷುದ್ರಸಿದ್ಧಿಗಳನ್ನು ಪಾದಾಕ್ರಾಂತಗಳನ್ನಾಗಿ ಮಾಡಿಮೆರೆದುದು. ಶಿಷ್ಯವಾತ್ಸಲ್ಯವು ತ್ರಿಕರ್ಣಪೂರ್ವಕವಾದುದು. ದಯಾರಸವು ಅವ್ಯಾಜವಾದುದು. ವಿದ್ಯಾಬಲವು ವಿಶಾಲವಾದುದು ಸದ್ಬೋಧ ಸರಣಿಯು ಸುಧಾಸದೃಶವಾದುದು. ಕೋಪಕ್ಕೆ ಪಾರವಿಲ್ಲದಿದ್ದರೂ ಅದು ಕ್ಷಣಭಂಗುರವಾದುದು. ಔದಾರ್ಯವೂ ಸಂಗರಹಿತ ಸ್ವಾಭಾವಿಕವಾದುದು ಇಂತಹವರಲ್ಲಿ ನೆಲೆಗೊಂಡ ಶಮದಮಾದಿ ಸದ್ಗುಣಗಳ ಬಗೆಗೆ ಬಿತ್ತರಿಸುವದು ಹಾಸ್ಯಾಸ್ಪದವೇ ಸರಿ. ಕಥಾನಾಯಕರು ಚಿಕ್ಕಂದಿನಲ್ಲಿಯೇ ಜಗದ್ಗುರು ಪೀಠಾರೋಹಣದ ಮಹಾಭಾರವನ್ನು ವಹಿಸಿ, ಶಿವಯೋಗ ಸಾಮರ್ಥ್ಯದಿಂದ ಸಕಲ ಬಲಗಳನ್ನು ಸಂಗ್ರಹಿಸಿ ಭುವನಮಾನ್ಯರಾಗಿ ಮೆರೆದು ಸದ್ಧರ್ಮಪೀಠದ ವಿಜಯಧ್ವಜವನ್ನು ಮೆರೆಯಿಸಿದುದಲ್ಲದೆ ಇತರ ಪೀಠಗಳನ್ನು ಉಜ್ವಲಗೊಳಿಸಿದರು. ಪೀಠಾಚಾರ್ಯ ಪರಂಪರೆಯಲ್ಲಿರುವ ಮಹಾತ್ಮರಮೇಲೆ ಜಗದುದ್ಧಾರದ ಮಹಾಭಾರವಿದೆ. ಸ್ವಕೀಯೋದ್ಧಾರವು ಸಾಮಾನ್ಯ ಮುಮುಕ್ಷುಗಳ ಕರ್ತವ್ಯವಾಗಿರುವದು. ಸ್ವಕೀಯ ಶರೀರಪೋಷಣೆ, ಸ್ವಕೀಯ ಜೀವೋದ್ಧಾರಗಳಷ್ಟೆ ಪೀಠಾಚಾ

ರ್ಯರಿಗೆ ಸಂಬಂಧಿಸಿದವುಗಳಲ್ಲ. ಅನಂತಾನಂತ ಜೀವಾತ್ಮರಿಗೆ ಆಶ್ರಮಧರ್ಮಾನುಗುಣವಾಗಿ ಕಾಲಮಾನರೀತ್ಯಾ ಸ್ವಕೀಯ ಸದಾಚರಣಪರಿರಂಜಿತವಾದ ಲೌಕಿಕ ಪಾರಮಾರ್ಥಿಕ ಪರಸ್ಪರಾವಿರೋಧವಾದ ಸದುಪದೇಶವನ್ನಿತ್ತು ಜಗತ್ತನ್ನೇ ಕಾಪಾಡುವ ಭಾರವು ಮಹಾಚಾರ್ಯರದಾಗಿರುವದು. ಇಂತಹ ಕಾರ್ಯಕ್ಷಮತೆಯು ಈ ಚರಿತ್ರನಾಯಕರಲ್ಲಿ ಸುಸ್ಪಷ್ಟವಾಗಿತ್ತೆಂದು ಉಲ್ಲೇಖಿಸುವದರಲ್ಲಿ ಸಂದೇಹವೇಯಿಲ್ಲ.

ಇಂತಹ ಮಹನೀಯ ಮಹೋದಯ ಮಹಾನುಭಾವಿ ಮಹಾತ್ಮರ ಚರಿತ್ರಗಳು ಜನತೆಯ ಕಲ್ಯಾಣಕ್ಕಾಗಿ ಮಹಾಕವಿಗಳಿಂದ ಬರಿಯಲ್ಪಟ್ಟು ಚಿರಂಜೀವಿಗಳಾಗಿರುವದು ಅತ್ಯಾವಶ್ಯಕವಾಗಿದೆ. ಶಾಸ್ತ್ರಗಳನ್ನು ಅಧೀತಿ ಬೋಧ ಆಚರಣ ಪ್ರಚಾರಗಳಿಂದ ಸಫಲಗೊಳಿಸುವವರು ಮಹಾತ್ಮ ಮಹಾಚಾರ್ಯರು. ಅಧ್ಯಯನಾನುಷ್ಠಾನ ಬೋಧಪ್ರಚಾರಗಳಿಲ್ಲದ ಶಾಸ್ತ್ರಗಳು ಮೃತಪ್ರಾಯಗಳಾಗಿರುವವು. ಮೂಕಶಾಸ್ತ್ರಗಳಿಂದ ಲೋಕಕ್ಕೆ ಪ್ರಯೋಜನವೇ ಇಲ್ಲ. ಶಾಸ್ತ್ರಗಳನ್ನು ಮಾತಾಡಿಸಿ ಮುಂದುವರಿಸುವವರು ಮಹಾಚಾರ್ಯ ಮಹಾತ್ಮರು. ಸಾಮಾನ್ಯರಿಗೆ ಶಾಸ್ತ್ರಜ್ಞಾನವೇ ಇರುವದಿಲ್ಲ. ಮಹಾನುಭಾವರ ಚರಿತ್ರದಲ್ಲಿ ಸರ್ವವೂ ಗರ್ಭಗತವಾಗಿರುವದು. ಆದುದರಿಂದಲೇ ಮಹಾಪುರುಷರ ಚರಿತ್ರಗಳನ್ನು ರಚಿಸಿ, ಜಗತ್ತಿನಲ್ಲಿ ಬೀರುವ ಪದ್ಧತಿಯು ಪ್ರಚಾರದಲ್ಲಿ ಬಂದಿದೆ. ಮಹಾಪುರುಷರ ಚರಿತ್ರಶ್ರವಣದಿಂದ ಶಾಸ್ತ್ರಜ್ಞಾನವಿಲ್ಲದ ಸಾಮಾನ್ಯ ಜನರು ಸದಾಚರಣ ಸಂಪನ್ನರಾಗಲು ತಕ್ಕ ಅನುಕೂಲಗಳುಂಟಾಗುವವು. ಮಹಾಪುರುಷರಿಲ್ಲದಿದ್ದರೆ ಶಾಸ್ತ್ರಗಳಿಗೆ ಸಾಫಲ್ಯವೇ ಇಲ್ಲ. ಆದರ್ಶ ಪುರುಷರ ಭೌತಿಕ ಶರೀರವು ಅಳಿದರೂ ಚರಿತ್ರಮಯ ಕೀರ್ತಿಕಾಯವು ಜಗದುದ್ಧಾರಕ್ಕೋಸುಗ ಉಳಿಯಬೇಕಾಗಿದೆ. ಇಂತಹ ಚರಿತ್ರಗಳು ಜಗತ್ಸಮುದ್ರದಲ್ಲಿ ವೀಚೀಕಲ್ಲೋಲನ್ಯಾಯದಿಂದ ತುಂಬಿತುಳುಕುತ್ತವೆ. ಹಳೆಯವು ಕಣ್ಮರೆಯಾದರೆ ನೂತನಗಳು ಜನ್ಮವೆತ್ತುತ್ತಲೇ ಇರುತ್ತವೆ. ಇವುಗಳಿಂದ ಲಾಭವನ್ನು ಪಡೆಯುವದು ಬೋಧಕ ವಾಚಕ ಶ್ರೋತೃಗಳ ಕರ್ತವ್ಯವಾಗಿದೆ.

ಆದರ್ಶ ಚರಿತ್ರಗಳಲ್ಲಿ ಶ್ರೀ ಸಿದ್ಧಲಿಂಗವಿಜಯ ಪುರಾಣವು ಒಂದಾಗಿರುವದು. ಇದು ಸಾಧಾರಣ ಪುರುಷರ ಚರಿತ್ರವಲ್ಲ. ಶ್ರವಣಮಾತ್ರದಿಂದಲೆ ಸರ್ವಪಾಪ ನಿವೃತ್ತಿದ್ವಾರಾ ಸದ್ಗತಿಯನ್ನೀಯುವ ಸಚ್ಚರಿತ್ರವಾಗಿರುವದು. ಪುರಾಣಗಳೆಲ್ಲವು ಚರಿತ್ರಗಳೇ ಆಗಿರುವವು. ವ್ಯಾಸಾದಿ ಮಹರ್ಷಿಗಳು ಅನೇಕ ಪುರಾಣಗಳನ್ನು ರಚಿಸಿರುವರು. ಅವುಗಳಲ್ಲಿ ಭಗವಂತನ ಭಗವದ್ಭಕ್ತರ ಗುರುಶಿಷ್ಯರ, ಸತ್ಪುರುಷ ಶರಣ ಶರಣೆಯರ ಪಾವನ ಲೋಕಪಾವನ ಜೀವನ ಚರಿತ್ರ

ಗಳೇ ವರ್ಣಿಸಲ್ಪಟ್ಟಿರುವವು. ಮಹಾಪುರುಷರನ್ನು ಬಿಟ್ಟರೆ ಪುರಾಣಗಳಿಗೆ ಜೀವ ನಾಧಾರವಾದ ಕಥಾವಸ್ತುವೇ ದೊರೆಯುವಂತಿಲ್ಲ. ಧನಕನಕಾದಿಗಳಿಗಿಂತಲು ಸಚ್ಚಾರಿತ್ರಗಳು ಜನತೆಗೆ ಹೆಚ್ಚು ಮೆಚ್ಚಿನ ಸಂಗ್ರಾಹ್ಯ ವಸ್ತುಗಳಾಗಿವೆ. ಪುರಾಣವನ್ನು ಹಳೇಕಾಲದಿಂದಲೂ ಪುಂಡ್ರಗೋಷ್ಟಿಯೆಂದು ಕರೆದಿರುವರು. (ಪುಂಡ್ರ) ಅಂದರೆ ರಸದಾಳಿ ಕಬ್ಬು, ತುದಿಯಕಡೆಯಿಂದ ಕಬ್ಬನ್ನು ಅಗಿಯುತ್ತಹೋದರೆ ಗೆಂಣು ಗೆಂಣಿಗೂ ರಸವು ಅತಿ ಮಧುರವಾಗಿರುವಂತೆ ಪುರಾಣದ ಆರಂಭದಿಂದ ಅಧ್ಯಾಯ ಸಂಧಿಭಾಗಗಳನ್ನು ನೋಡುತ್ತ ಹೋದರೆ ಪೌರಾಣಿಕ ಕಥಾಭಾಗವು ಮಧುಮಧುರವಾಗುತ್ತದೆ.

ಶ್ರೀ ಸಿದ್ಧಲಿಂಗವಿಜಯ ಪುರಾಣವು ಅಂತಹ ಮಧುರ ಕಾವ್ಯವಾಗಿದೆ. ಸರಸವಾದ ಸರಣಿ, ಸೀಮೆಯನ್ನು ಮೀರದ ರಸಾಲಂಕಾರಗಳು ಭಾವಿಕರ ಮನೋವಿಕಾಸ ಹೇತುಗಳಾದ ಭಕ್ತಿಭಾವಭಂಗಿಗಳು ಕಾವ್ಯರಚನಾ ಪದ್ಧತಿಯನ್ನು ಅಲಂಕಾರಗೊಳಿಸುವ ವೃತ್ತಿ ಪ್ರಾಸ ಓಜೋದೀಪ್ತಿಗಳು ರಸಿಕರಂಜನಗಳಾಗಿವೆ. ಒಟ್ಟಿನಲ್ಲಿ ಪುರಾಣವು ಭವರೋಗ ದಿವ್ಯೌಷಧ ಗುರುಭಕ್ತಿಲತಾಕಲ್ಪ-ವೃಕ್ಷ ಮುಮುಕ್ಷು ಜನವಿಹಾರೋದ್ಯಾನವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು.

ಈ ಪುರಾಣವನ್ನು ರಚಿಸಿದ ಕವಿಗಳೆಂದರೆ ಸೊಲ್ಲಾಪುರ ನಗರದಲ್ಲಿ ಪ್ರಕಾಶಿಸುವ ಈಗಿನ ವೀರಶೈವ ಗುರುಕುಲದ ಪ್ರಾಧ್ಯಾಪಕರು, ಮೊದಲು ಶ್ರೀ. ಕೈ. ರಾವಬಹದ್ದೂರ ವಾರದ ಅಪ್ಪಾಸಾಹೇಬರ ಸಂಸ್ಕೃತ ವಿದ್ಯಾಪ್ರಚಾರಕಾರ್ಯದಲ್ಲಿ ಪ್ರಥಮ ಪಾತ್ರವನ್ನು ವಹಿಸಿ ಶ್ರಮಿಸಿದ ವಯೋವೃದ್ಧ - ಜ್ಞಾನವೃದ್ಧ, ಗೃಹಸ್ಥಾಶ್ರಮ ತಪೋವೃದ್ಧರಾದ ನಾಲವಾರ **ಜಗದೀಶಶಾಸ್ತ್ರಿಗಳವರು.** ಅಧ್ಯಾಪಕರಮೇಲೆ ಎಷ್ಟು ಭಾರವಿದೆಯೆಂಬುವದನ್ನು ತಿಳಿಯಬೇಕಾದರೆ ಪಂಡಿತ ಜಗದೀಶಶಾಸ್ತ್ರಿಗಳ ಆದರ್ಶವನ್ನಿಟ್ಟುಕೊಂಡರೆ ಸಾಕಾಗಿದೆ.

ಸಹಿಷ್ಣುಗಳೂ ಸದಾಚಾರ ವಿಭೂಷಿತರೂ, ಹರಗುರುಭಕ್ತಿ ಪರಾಯಣರೂ, ನಯವಿನಯಾದಿ ಸದ್ಗುಣಾಲಂಕೃತರೂ, ಜನಪ್ರಿಯರೂ ಆದ ಶ್ರೀ ಶಾಸ್ತ್ರಿಗಳವರ ಜೀವನವು ಕಾವ್ಯಶಾಸ್ತ್ರ ಅಧ್ಯಯನ ಅಧ್ಯಾಪನಗಳಲ್ಲಿಯೇ ಸಾಗುತ್ತಲಿದೆ. ನ್ಯಾಯವ್ಯಾಕರಣಗಳಲ್ಲಿ ಪಾಂಡಿತ್ಯವಿದ್ದರೂ ಸಾಹಿತ್ಯವು ಇವರ ಕೈ-ಗೊಂಬೆ. ಸಂಸ್ಕೃತ ಕನ್ನಡಗಳಲ್ಲಿ ಪೂರ್ಣಪಾಂಡಿತ್ಯವಿರುವದಲ್ಲದೆ ಮರಾಠಿ ಹಿಂದಿ ಭಾಷೆಗಳಲ್ಲಿ ಗತಿಯಿದೆ. ಇವರ ಸಾಹಿತ್ಯಪ್ರಭೆಯನ್ನರಿತು ಶಿವೈಕ್ಯ ಶ್ರೀ ರಂಭಾಪುರೀ ಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು

"**ಸಾಹಿತ್ಯರತ್ನ**" ವೆಂಬ ಘನಪ್ರಶಸ್ತಿಯನ್ನನುಗ್ರಹಿಸಿದರು. ಎಷ್ಟೋ ವಿದ್ಯಾರ್ಥಿಗಳು ಇವರ ಅಮೃತ ಹಸ್ತದಿಂದ ವಿದ್ಯಾವಂತರಾಗಿ ಉಚ್ಚಸ್ಥಾನಗಳನ್ನಲಂಕರಿಸಿರುವರು. ಇದಕ್ಕಾಗಿ ಇವರಿಗೆ ಈಗಿನ ರಂಭಾಪುರೀ ಜಗದ್ಗುರುಗಳವರು "**ಕುಲಪತಿ**" ಎಂಬ ಬಹುಮಾನ ಮಹಾಪ್ರಶಸ್ತಿಯನ್ನು ದಯಪಾಲಿಸಿರುವರು ಇವರ ಸಂಸ್ಕೃತ ಕರ್ನಾಟಕೋಭಯ ಭಾಷಾಕವಿತಾಶಕ್ತಿಯು "ಉಭಯಕವಿತಾ ವಿಶಾರದ" ಶ್ರೀ. ಷಡಕ್ಷರ ಕವಿಗಳನ್ನು ಸ್ಮರಣಕ್ಕೆ ತರುವುದಾಗಿದೆ. ಸದ್ಯಃ ಇಂಥ ಕವಿಗಳು ಅತಿ ವಿರಳ.

"ಸುದುರ್ಲಭಂ ಪ್ರಾಪ್ಯ ಕವಿತ್ವರತ್ನಂ
ತದಸ್ಯ್ಯಮೇಶಾಯ ನಿವೇದನೀಯಂ"

ಎಂಬುವಂತೆ ಪಂಡಿತರ ಕವಿತ್ವಶಕ್ತಿಯು ಶಿವಸತ್ಕಾವ್ಯರಚನೆಗಾಗಿಯೇ ಮೀಸಲಾಗಿರುವದು. ಇವರ ಕವಿತ್ವಶೈಲಿಯು ರನ್ನ, ಪೊಂಪ, ಕಾಳಿದಾಸ ಮುಂತಾದವರನ್ನು ಅನುಸರಿಸುತ್ತಿರುವಂತಹುದಾಗಿದೆ. ಕವಿತ್ವಕ್ಕಾಗಿಯೇ ಇವರು ಆಯುಷ್ಯದ ಬಹುಭಾಗವನ್ನು ಉಪಯೋಗಿಸಿದ್ದರೆ ಅನಂತಾನಂತ ಮಹಾಕಾವ್ಯಗಳನ್ನು ರಚಿಸಿ ಕವಿಸಾರ್ವಭೌಮ ಪದವಿಗೆ ತಕ್ಕವರಾಗುತ್ತಿದ್ದರೆಂಬುವದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲ. ಸ್ವಾಭಾವಿಕ ಸರಣಿಯಿಂದ ಕಾವ್ಯಪದ್ಧತಿಯಂತೆ ಸರಸ ಕಾವ್ಯಗಳನ್ನು ರಚಿಸುವವರು ವರಕವಿಗಳು. ಪಂಡಿತರನ್ನು ಈ ಮಾಲಿಕೆಯಲ್ಲಿರಿಸುವದು ಅತಿಶಯೋಕ್ತಿಯ ಮಾತಲ್ಲ. ಕವಿತಾಮಾರ್ಗವನ್ನು ಹೋಲದ ಕಾವ್ಯಗಳನ್ನು ರಚಿಸುವ ನರಕವಿ ಅನ್ಯರಚಿತ ಕಾವ್ಯಗಳನ್ನು ಸಂಪೂರ್ಣವಾಗಿ ಅಪಹರಿಸಿ ಕೊನೆಯಲ್ಲಿ ಸ್ವಕೀಯ ಮುದ್ರಣಾರ್ಪಣವನ್ನು ಮಾಡುವ ಚೋರ ಕವಿಗಳ ಮಾತು ಬೇರೆ.

"ಛಾಯಾಮುಪಹರತಿ ಕವಿಃ । ಪದಮೇಕಂ ಪಾದಮೇಕಂ ವಾ ।
ಸರ್ವಂ ಹರ್ತ್ರೇ ಸಾಹಸಕರ್ತ್ರೇ ನಮೋಽಸ್ತು ಕವಯಿತ್ರೇ"

ಕಥಾವಸ್ತುವಿನಂತೆಯೆ ಕವಿಯ ಹೃದಯವು ಶುಷ್ಕ - ಶಾಂತ - ರಸಿಕವಾಗಿದ್ದರೆ, ಅಂತಹ ಲೇಖನಿಯಿಂದ ಹೊರಹೊಮ್ಮುವ ಕಾವ್ಯಾಮೃತ ರಸವನ್ನು ಎಷ್ಟು ಸವಿದರೂ ಸಾಕಾಗಲಾರದು.

ಶ್ರೀ ಪಂಡಿತರು ಹರಗುರುಭಕ್ತಿ ಸದ್ವೃತ್ತಾಚರಣಗಳಿಂದ ಪವಿತ್ರಾತ್ಮರಾಗಿರುವವರಿಂದ ಅವರ ವಿಮುಲವಾಣಿಯಿಂದ ಉಕ್ಕಿ ಹೊರಸೂಸುವದು. ಶ್ರೀ ಸಿದ್ಧಲಿಂಗವಿಜಯ ಪುರಾಣವಾದರೂ ಸರ್ವಾಂಗಪೂರ್ಣವಾಗಿ ಆಪ್ಯಾಯನವಾಗಿರುವದು. ಅರ್ಥಮೋಕ್ಷಾದಿ ಸ್ವಾರ್ಥ ಸಂಕುಚಿತ ಭಾವದಿಂದ ಹೊರಬಿದ್ದ ಕಾವ್ಯ

ಗಳು ಸರ್ವತೋಮುಖ ಶುದ್ಧಗಳಾಗುವವು ವಿರಳ. " ಕಾವ್ಯಂ ಯಶಸೇsರ್ಥಕೃತೆ ವ್ಯವಹಾರವಿದೆ ಶಿವೇತರಕ್ಷತಯೇ । ಸದ್ಯಃ ಪರನಿರ್ವೃತಯೆ ಕಾಂತಾಸಮ್ಮಿತಯೋಪದೇಶಯುಜೇ ,, ಕವಿತಾಪ್ರಯೋಜನ ಗುಣಗಳನ್ನು ಶ್ರೀ ಸಿದ್ಧಲಿಂಗವಿಜಯ ಪುರಾಣದ ಕವಿಗಳಲ್ಲಿ ನಿರರ್ಗಳವಾಗಿ ನೋಡಬಹುದಾಗಿದೆ. ಇಂತಹ ಸರಸ ಕವಿಗಳಿಂದ ವಿರಚಿತವಾದ **ಶ್ರೀ ಸಿದ್ಧಲಿಂಗವಿಜಯ ಪುರಾಣವು** ಸರ್ವತೋಮಾನ್ಯವಾಗಿ ಮೆರೆದು ಜನಮನಸೊ ಮಹಾನಂದದಾಯಕವಾಗಲಿ, ಪುರಾಣ ರಚನಾ ಪ್ರೇರಕರಾದ ಶ್ರೀ ಹೊಟಗಿ ಸ್ವಾಮಿಗಳಿಗೂ, ಪುರಾಣ ಕವಿಗಳಾದ ವೇ|| ಪಂ|| ಜಗದೀಶಶಾಸ್ತ್ರಿಗಳವರಿಗೂ ಧರ್ಮಪ್ರಚಾರಾರ್ಥವಾಗಿ ಧನಸಹಾಯ ಮಾಡಿದ ಮುಬಲಗುಂಡಿ ಧರ್ಮವೀರ ಶ್ರೀಮಾನ್ ಶರಣಪ್ಪ ದೊರೆಗಳಿಗೂ ಕಥಾನಾಯಕನಾದ ಶ್ರೀ ಜಗದ್ಗುರು **ಸಿದ್ಧಲಿಂಗ ಮಹಾಚಾರ್ಯ ಮಹಾತ್ಮನು** ದೀರ್ಘಾಯುರಾರೋಗ್ಯಾದಿ ಸಕಲ ಸಂಪತ್ಸಮುನ್ನತಿಯನ್ನಿತ್ತು ಇಂತಹ ಅನೇಕ ಕಾರ್ಯಗಳಾಗುವಂತೆ ಕರುಣಿಸಲೆಂದು ಹೃತ್ಪೂರ್ವಕವಾಗಿ ಹರಸಲಾಗಿದೆ.

ಸಮಸ್ತ ಸನ್ಮಂಗಳಾನಿ ಭವಂತು.

ಸಿದ್ಧಲಿಂಗಶಿವಾಚಾರ್ಯ ಪುರಾಣಂ<br>
ಪೃಥಿವೀ ತಲೆ । ಜಗದೀಶಕವಿಪ್ರೋಕ್ತಂ<br>
ಜೀಯಾದಾಶಶಿ ಭಾಸ್ಕರಂ ||೦||



ಶ್ರೀಮದ್ವಾರಾಣಸೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು

## ಶ್ರೀ ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ



## ಶುಭಾಶೀರ್ವಾದ

ಶ್ರೀ ಜಗದ್ಗುರು ಪಂಚಪೀಠೋದ್ಧಾರಕರೂ, ಪರಮ ತಪೋನಿಧಿಗಳೂ ವೀರಶೈವ ಸಮಾಜಕ್ಕೆ ಮುಕುಟಪ್ರಾಯರೂ, ಜಂಗಮಕುಲಸಾರ್ವಭೌಮರೂ, ಶಾಪಾನುಗ್ರಹ ಸಮರ್ಥರೂ ಸ್ವತಃಸಿದ್ಧರೂ, ಸಿದ್ಧಗುರುಗಳೂ ಆಗಿದ್ದ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ೧೦೦೮ ಶ್ರೀ ಜಗದ್ಗುರು ಶಿವೈಕ್ಯ, **ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು** ವೀರಶೈವ ಸಮಾಜೋದ್ಧಾರಕ್ಕಾಗಿಯೇ ಅವತರಿಸಿ, ವಿವಿಧ ಲೀಲಾವಳಿಗಳ ಮೂಲಕ ವೀರಶೈವ ಮತದ, ವಿಶೇಷವಾಗಿ ಗುರುವರ್ಗದ ಸರ್ವತೋಮುಖವಾದ ಉನ್ನತಿಯನ್ನು ಮಾಡಿರುವದು ಸರ್ವಜನವೇದ್ಯವೇ ಇದೆ. ಆ ಶಿವಯೋಗಿ ಸಾರ್ವಭೌಮರ ಜೀವನದ ಒಂದೊಂದು ಘಟನೆಯು ಒಂದೊಂದು ರೀತಿಯಲ್ಲಿ ಮಾನವನಿಗೆ ಮಾರ್ಗದರ್ಶಕವಾಗಿದೆ. ಆ ಮಹಾತ್ಮರ ಪವಿತ್ರ ಚರಿತ್ರೆಯು ಎಂದೆಂದಿಗೂ ವೀರಶೈವರಿಗೆ ಸ್ಫೂರ್ತಿದಾಯಕವೂ, ಆದರ್ಶಪ್ರಾಯವೂ ಆಗಿದೆ. ಆ ದಿವ್ಯಾತ್ಮರ ಚರಿತ್ರೆಯು ಮಾನವ ಕುಲಕೋಟಿಯನ್ನುದ್ಧರಿಸುವಂತಹದಾಗಿದೆ.

ಉಭಯಕವಿತಾಚತುರರೂ, ಕವಿಕಂಠೀರವರೂ, ಭೂತಪೂರ್ವ ವಾರದ ಸಂಸ್ಕೃತ ಪಾಠಶಾಲಾಪ್ರಧಾನಾಧ್ಯಾಪಕರೂ ಸಧ್ಯಃ ವೀರಶೈವಗುರುಕುಲದ ಪ್ರಾಧ್ಯಾಪಕರೂ ಕುಲಪತಿಗಳೂ, ಸಾಹಿತ್ಯರತ್ನ, ಶಿವಾದ್ವೈತ ವಿದ್ಯಾವಿಭೂಷಣಾದಿ ಪದವೀಭೂಷಿತರೂ ಶ್ರೀ ಜಗದ್ಗುರು ಕಾಶೀ ವಿಶ್ವಾರಾಧ್ಯ ಜ್ಞಾನಸಿಂಹಾಸನ ಮಹಾಸಂಸ್ಥಾನದ ಆಸ್ಥಾನ ವಿದ್ವಾಂಸರೂ ಆದ, ನಾಲವಾರ ಸೂಗೂರು ಮಠೀಯ ವೇ|| ಪಂ|| **ಜಗದೀಶಶಾಸ್ತ್ರಿಗಳವರು** ಪ್ರಾತಃಸ್ಮರಣೀಯರಾದ ಇಂತಹ ಮಹಾಗುರುಗಳ ಪವಿತ್ರ ಚರಿತ್ರೆಯನ್ನು ಅತ್ಯಂತ ಮಧುರವೂ ಸರಸವೂ, ಅತಿಬಂಧುರವೂ ಸುಂದರವೂ ಆದ ಶೈಲಿಯಲ್ಲಿ ಬರೆದು ವೀರಶೈವ ವಾಙ್ಮಯವನ್ನು ವಿಕಾಸಗೊಳಿಸಿರುವದಷ್ಟೇ ಅಲ್ಲ, ಮಾನವ ಕುಲಕೋಟಿಗೇ ಮಹೋಪಕಾರ ಮಾಡಿದ್ದಾರೆ. ಕುಲಪತಿ ವೇ|| ಪಂ|| ಜಗದೀಶಶಾಸ್ತ್ರಿಗಳವರು ಪ್ರಕಾಂಡ ಪಂಡಿತರೂ, ಶ್ರೇಷ್ಠ ಕವಿ

ಗಳೂ ಆಗಿದ್ದಾರೆ. ಇವರ ವರದ ಹಸ್ತದಲ್ಲಿ ಸಿದ್ಧರಾದ ಪಂಡಿತರನ್ನರನೇಕರು ರಸಿಕ ಕವಿಗಳಾಗಿ, ಶಾಸ್ತ್ರಿಗಳಾಗಿ, ಕ್ರಾಂತಿಕಾರಿಗಳಾಗಿ, ಮಹಾತ್ಮರಾಗಿ, ಸ್ಥಿರ-ಚರಪಟ್ಟಾಧ್ಯಕ್ಷರಾಗಿ, ವಿರಕ್ತಾಶ್ರಮಿಗಳಾಗಿ, ಮಹಾಮಹಾ ಜಗದ್ಗುರು ಪೀಠಾಧೀಶ್ವರರಾಗಿ ವೀರಶೈವ ಸಮಾಜವನ್ನು ಪ್ರಜ್ವಲಗೊಳಿಸಿದ್ದಾರೆ; ಪ್ರಜ್ವಲಗೊಳಿಸುತ್ತಲೂ ಇದ್ದಾರೆ. ಇವರ ಅವಿಶ್ರಾಂತ ಪರಿಶ್ರಮದಿಂದ ವೀರಶೈವ ಸಮಾಜವು ಸಾಕಷ್ಟು ಸುಸಂಸ್ಕೃತವಾಗಿದೆ. ಆಗುತ್ತಲಿದೆ. ಶಾಸ್ತ್ರಿಗಳವರು ವಯೋವೃದ್ಧರಾ-ಗಿಯೂ, ಇಂತಹ ಅಮೂಲ್ಯ ಕೃತಿಗಳನ್ನು ಸಮಾಜ ಹಿತಕ್ಕಾಗಿ ಪ್ರದಾನಮಾಡುತ್ತಿರುವದು ಅತ್ಯಂತ ಸಂತೋಷವನ್ನೂ, ಅಭಿಮಾನವನ್ನೂ ಹುಟ್ಟಿಸತಕ್ಕದ್ದಾ-ಗಿದೆ. ಅವರ ಸದ್ಯದ ಈ ಕೃತಿಚಂದ್ರಿಕೆಯು ದೂರವಾಗಿದ್ದ ಲೋಕವಿಖ್ಯಾತ ಮಹಾವಿಭೂತಿಯೊಂದರ ಆದರ್ಶಲೀಲೆಗಳನ್ನು ಪುನಃ ಜನಮನೋ ರಂಗ ದ ಲ್ಲಿ ಬಿಂಬಿಸಿ ಮತ್ತೊಮ್ಮೆ ನವಜಾಗ್ರತೆಯನ್ನುಂಟುಮಾಡಲಿ.

ವೀರಶೈವ ಧರ್ಮ ಸಾಮ್ರಾಜ್ಯ ಚಕ್ರವರ್ತಿಗಳಾಗಿ ಪರಶಿವಲಿಂಗದಲ್ಲಿ ಲೀನರಾದ ಆ ದಿವ್ಯ ಗುರುಸಾರ್ವಭೌಮರ ಸಂಪೂರ್ಣ ಕೃಪೆಗೆ ಪಾತ್ರರಾಗಿ ಹೊಟಗೀಶ್ವರರಾಗಿ, ಬಾಲತಪಸ್ವಿಗಳಾಗಿ, ವೀರತಪಸ್ವಿಗಳಾಗಿ, ವೀರಶೈವ ಗುರುಕುಲ ಸ್ಥಾಪಕರಾಗಿ ಪರಿಶೋಭಿಸುವ **ಶ್ರೀ. ಷ. ಬ್ರ. ಚನ್ನವೀರಶಿವಾಚಾರ್ಯ ಸ್ವಾಮಿಗಳು** ಇಂತಹ ಪವಿತ್ರ ಕೃತಿಗಳಿಗೆ ಪ್ರೋತ್ಸಾಹ ಸಹಾಯಾದಿಗಳನ್ನೀಯುತ್ತಿರುವದು ಆದರ್ಶವೂ, ಅನುಕರಣೀಯವೂ ಆಗಿದೆ. ಶ್ರೀ ಜಗದ್ಗುರು ಸಿದ್ಧಲಿಂಗರ ಪುರಾಣವು ಅಮರವಾಗಿ ಸದಾ ನಮ್ಮೆಲ್ಲರ ಮಾರ್ಗದರ್ಶನವಾಗಲಿ, ಷಂ|| ಜಗದೀಶಶಾಸ್ತ್ರಿಗಳವರು ಇಂತಹ ಅನೇಕ ಕೃತಿಗಳನ್ನು ರಚಿಸಲು ಬಹು-ಕಾಲ ಬಾಳಿ ಬೆಳಗಲಿ. ಜಗದ್ಗುರು ವಿಶ್ವಾರಾಧ್ಯನು ಶಾಸ್ತ್ರಿಗಳವರಿಗೆ ದೀರ್ಘಾಯುರಾರೋಗ್ಯ ಭಾಗ್ಯಗಳನ್ನಿತ್ತು ಕಾಪಾಡಲಿ.

—( ಇತಿ ಶಿವಂ ಭೂಯಾತ್ )—

# ಕಾಶೀ ವೀರಶೈವ ವಿದ್ವತ್ಸಂಘದ ಅಭಿಪ್ರಾಯವು

---

ಉಭಯ ಕವಿತಾಚತುರರೂ, ಕವಿಕಂಠೀರವರೂ, ಶಿವಾದ್ವೈತ ವಿದ್ಯಾವಿಭೂಷಣ, ಸಾಹಿತ್ಯರತ್ನಾದಿ ಬಿರುದಾಂಕಿತರೂ, ಕಾಶೀಪೀಠದ ಆಸ್ಥಾನ ವಿದ್ವಾಂಸರೂ ಆಗಿರುವ ಸೂಗೂರು ಮಠದ ವೇ|| ಪಂ|| ಕುಲಪತಿ **ನಾಲವಾರ ಜಗದೀಶ ಶಾಸ್ತ್ರಿಗಳವರು** ಉಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ೧೦೦೮ ಶ್ರೀ ಶಿವೈಕ್ಯ ಜಗದ್ಗುರು **ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ** ದಿವ್ಯ ಚರಿತ್ರೆಯನ್ನು ( ಪುರಾಣವನ್ನು ) ವಾರ್ಧಿಕ ಷಟ್ಪದಿಯಲ್ಲಿ ಸುಮನೋಹರವಾಗಿ ಬರೆದಿದ್ದಾರೆ. ಮಹಾಮಹಿಮರೂ, ಅಘಟಿತಘಟನಾಲೋಲರೂ, ವೀರಶೈವ ವಾರಿಧಿ ಚಂದ್ರರೂ ಆಗಿದ್ದ ಶಿವೈಕ್ಯ ಸಿದ್ಧಲಿಂಗ ಜಗದ್ಗುರು ಮಹಾಚಾರ್ಯವರ್ಯರ ಪುರಾಣವನ್ನು ಬರೆಯಲಿಕ್ಕೆ ಸಚ್ಚರಿತ್ರರೂ, ಸತತೋದ್ಯಮಿಗಳೂ, ಸಧಾಸಾರಸ್ವತೋಪಾಸಕರೂ ಆಗಿರುವ ವೇ|| ಪಂ|| ಜಗದೀಶಶಾಸ್ತ್ರಿಗಳವರ ಸಿದ್ಧಹಸ್ತವು ಲೇಖನಿ ಹಿಡಿಯುವು ಅತ್ಯಂತ ಸುಯೋಗ್ಯವೇ ಆಗಿದೆ. ಸಿದ್ಧಲಿಂಗ ಪುರಾಣವು ಆದ್ಯಂತವಾಗಿ ಆಕರ್ಷಣೀಯವೂ, ಅನೇಕ ರೀತಿಯಿಂದ ಬೋಧಪ್ರದವೂ ಆಗಿದೆ. ಶ್ರೀ ಕಾಶೀ ವೀರಶೈವ ವಿದ್ವತ್ಸಂಘವು ಶಾಸ್ತ್ರಿಗಳವರ ಈ ಅಮೂಲ್ಯ ಕೃತಿಯನ್ನು ಮನಸಾ ಪ್ರಶಂಸಿಸುತ್ತಿದೆಯಲ್ಲದೆ ಇಂತಹ ಅನೇಕ ಮಹಾತ್ಮರ ಸಚ್ಚರಿತ್ರೆಗಳು ಶಾಸ್ತ್ರಿಗಳವರ ಸಾರಸ್ವತಾನುಷ್ಠಾನಕ್ಕೆ ಸಾಮಗ್ರಿಗಳಾಗಲೆಂದು ಬಯಸುತ್ತದೆ.

ಕಾರ್ಯದರ್ಶಿ,

**ಕಾಶೀ ವೀರಶೈವ ವಿದ್ವತ್ಸಂಘ.**

॥ ನಮಃ ಪಂಚ ಜಗದ್ಗುರುಭ್ಯಃ ॥



ಬಾಲತಪಸ್ವಿ

ಶ್ರೀ ಷ. ಬ್ರ. ಚನ್ನವೀರ ಶಿವಾಚಾರ್ಯ

ಮಹಾಸ್ವಾಮಿಗಳು,

ಬೃಹನ್ಮಠ ಹುಟಗಿ.

|| ಓಂ ನಮಃಪಂಚಜಗದ್ಗುರುಭ್ಯಃ ||

# ★ ಸತ್ಯಸಮಾಚಾರ ★



ಶ್ರೀ ೧೦೦೮ ಜಗದ್ಗುರು ಸಿದ್ಧಲಿಂಗ ಶಿವಯೋಗಿ ಸಾರ್ವಭೌಮರ ಸಚ್ಚರಿತ್ರವನ್ನು ಪುರಾಣ ರೂಪದಲ್ಲಿ ಬರೆಯಲು ವೇ|| ಪಂ|| ಕುಲಪತಿ **ಶ್ರೀ ಜಗದೀಶ ಶಾಸ್ತ್ರಿಗಳವರಿಗೆ** ಬಿನ್ನೈಸಿಕೊಂಡೆನು. ಪಂಡಿತರು ತಮ್ಮ ಸ್ವಭಾವಕ್ಕನುಸರಿಸಿ ವಿನಯವನ್ನೇ ತೋರಿಸಿದರು. ಪಂಡಿತರಿಂದಾಗದಿದ್ದರೆ ಪಾಮರರಿಂದಾಗಬಹುದೇ ? ಎಂದು ಪುನಃ ಆ ಪಂಡಿತರನ್ನೇ ಕೇಳಿಕೊಳ್ಳಲಾಗಿ ಅವರು ಒಪ್ಪಿ, ಬರೆಯಲು ಆರಂಭಿಸಿದರು. ರಾಘವಾಂಕನು " ಶ್ರೀ ಸಿದ್ಧರಾಮ ಚರಿತ " ವನ್ನು ಬರೆದಂತೆಯೇ ಈ ನಮ್ಮ " **ಕವಿಕಂಠೀರವ**"ರು **ಶ್ರೀ ಸಿದ್ಧಲಿಂಗವಿಜಯ** ಪುರಾಣವನ್ನು ಬರೆದಿದ್ದಾರೆಂದು ಉದ್ದಾಮ ಪಂಡಿತರೆಲ್ಲರೂ ಮುಕ್ತಕಂಠದಿಂದ ಒಪ್ಪಿ ಈ ಪುರಾಣವನ್ನು ತಮ್ಮ ಮಸ್ತಕದಲ್ಲಿರಿಸಿಕೊಂಡಿದ್ದಾರೆ. ಪಂಡಿತರು ನಮ್ಮ ' **ಶ್ರೀಮದ್ವೀರಶೈವ ಗುರುಕುಲ** 'ದ ಅಧ್ಯಾಪನ ಕಾರ್ಯವನ್ನು ಪೂರೈಸಿಕೊಂಡು ಈ ಪುರಾಣವನ್ನು ರಚಿಸಿದ್ದಾರೆ. ಹಣ್ಣಾದ ಪಂಡಿತರು ಹಣ್ಣಾದ ಯೋಗೀಶ್ವರರ ಚರಿತ್ರವೆಂಬ ಹಣ್ಣನ್ನು ಸಮಾಜಕ್ಕಾಗಿ ಅರ್ಪಿಸಿದ್ದಾರೆ. ಈ ಹಣ್ಣಿನ ಆಸ್ವಾದವನ್ನು ಗ್ರಹಿಸಿ ಸಮಾಜವು ಸುಖಿಯಾಗಲಿ.

ಈಗ ಕುಲಪತಿಗಳಿಗೆ ೮೩ ವರ್ಷ. ಇಂತಹ ವಾರ್ಧಿಕ್ಯದಲ್ಲಿಯೂಕೂಡ ಸಮಾಜ ಸೇವೆಯನ್ನು ಅವಿಚ್ಛಿನ್ನವಾಗಿ ಮಾಡುತ್ತಿರುವರು. ಪಂಡಿತರು ಧನ ಲೋಭಿಗಳಲ್ಲ. ಅನೇಕರು ಅನೇಕಸ್ವಾಮಿಗಳ ಚರಿತ್ರೆಯನ್ನು ಬರೆಯಲು ಹೇಳಿ ಅಷ್ಟು ಹಣವನ್ನೀಯುವೆವು, ಇಷ್ಟು ಹಣವನ್ನೀಯುವೆವು ಎಂದು ಹೇಳಿದವರಿಗೆ ಶರಣಾರ್ಥಿಹೊಡೆದೇ ಕಳುಹಿಸಿದ್ದಾರೆ. ಪಂಡಿತರು ಯಾವಪಕ್ಷಗಳನ್ನು ವಹಿಸದೆ ಸತ್ಯಸಮಾಚಾರವನ್ನೇ ಸುರುವಿದ್ದಾರೆ. ಈ ಪುರಾಣದಲ್ಲಿಯ ಅರ್ಧಭಾಗವು ಶ್ರೀ

ಚರಿತ್ರನಾಯಕರ ಶ್ರೀಮುಖದಿಂದಲೇ ಅಪ್ಪಣೆಕೊಡಿಸಿದ್ದಾಗಿದೆ. ೧೯೩೬ ರಲ್ಲಿ ಬಾರ್ಶಿಗೆ ಶ್ರೀ ಸನ್ನಿಧಾನವು ಆಗಮಿಸಿತು. ೧೯೩೭ ಸೊಲ್ಲಾಪುರಕ್ಕೆ, ೧೯೩೮ ರಲ್ಲಿ ಪಂಢರಪುರ ಮಂಗಳವೇಢೆ ಮುಕ್ಕಾಮು ಇತ್ತು. ಈ ಅವಧಿಯಲ್ಲಿ ನಾನು ಶ್ರೀಪಾದ ಸೇವೆಯಲ್ಲಿಯೇ ಇದ್ದೆನು. ಶ್ರೀ ರೇಣುಕರು ಯಕ್ಷಮಿಥುನವನ್ನು ದಹಿಸಿದ ಸ್ಥಲವಾದ ಮಾಸನೂರು ಕ್ಷೇತ್ರಕ್ಕೆ ಸವಾರಿಯು ಪದೇಪದೇ ದಯಮಾಡಿಸುತ್ತಿತ್ತು. ಆ ಪ್ರಶಾಂತ ಸ್ಥಲದಲ್ಲಿ "ತಮಗೆ ತಮ್ಮ ಆಯುಷ್ಯದಲ್ಲಿ ನಡೆದ ಕಷ್ಟ-ನಷ್ಟಗಳನ್ನು ಸಹಜವಾಗಿಯೇ,, ಉಪದೇಶಿಸುತ್ತಿದ್ದರು. ಅವುಗಳನ್ನು ನಾನು ಟಿಪ್ಪಣೆಮಾಡಿಕೊಂಡಿದ್ದೆನು. ಅವನ್ನೇ ನಮ್ಮಪಂಡಿತೋತ್ತಮರಿಗೆ ತಿಳಿಸಿದ್ದೇನೆ ಇನ್ನೂ ಕೆಲವು ವೃದ್ಧರಿಂದ ಕೇಳಿ ಈ ಪುರಾಣದಲ್ಲಿ ಸೇರಿಸಲಾಗಿದೆ. ಇನ್ನೂ ಕೆಲವು ಮಹತ್ವಗಳು ಉಳಿದಿರಬಹುದು. ಅವುಗಳನ್ನು ಯಾರಾದರೂ ಬಲ್ಲವರು ತಿಳಿಸಿದರೆ ಪುನರ್ಮುದ್ರಣದಲ್ಲಿ ಸೇರಿಸಲಾಗುವದು.

ನಮ್ಮ ಧರ್ಮವೀರ ದಾನಶೂರ ಶ್ರೀಮಂತ **ಶರಣಪ್ಪಣ್ಣ ಧತ್ತೇಪೂರ** ಇವರ ಉದಾರ ಆಶ್ರಯದಲ್ಲಿ ಹೊರಡುವ ಗ್ರಂಥಗಳಿಗಾಗಿ ಕೆಲವು ಪ್ರೆಸ್ಸಿನ ಒಡೆಯರು ಬಹಳೇ ತೊಂದರೆಗಳನ್ನು ಕೊಟ್ಟರು. ಈ ಪುರಾಣ ಮುದ್ರಣಕ್ಕೆಮಾತ್ರ ಯಾವ ತೊಂದರೆಯಾಗಿಲ್ಲಾದ್ದರಿಂದ **ವೇ. ಶ್ರೀ. ಜಿ. ಎಂ. ಗುರುಸಿದ್ಧ ಶಾಸ್ತ್ರಿಗಳವರು** ಅಭಿನಂದನೀಯರಾಗಿದ್ದಾರೆ. ಇದೇ ಸತ್ಯಸಮಾಚಾರ. ಅಸ್ತು ಶ್ರೀ ಗುರುಸಾರ್ವಭೌಮನ ಪುರಾಣವನ್ನು ಓದಿ - ಹೇಳಿ – ಕೇಳಿ - ಕೇಳಿಸಿ ಸರ್ವರೂ ಧನ್ಯರಾಗಲೆಂದು ಹೃತ್ಪೂರ್ವಕ ಹಾರೈಸುವ,

ಹೊಟಗಿ ಬೃಹನ್ಮಠಾಧ್ಯಕ್ಷ

**ಶ್ರೀ. ಷ|| ಬ್ರ. ಚನ್ನವೀರಶಿವಾಚಾರ್ಯರು.**



॥ ಓಂ ॥

# ವಿಷಯಾನುಕ್ರಮಣಿಕೆ

**೪ ನೇ ಸಂಧಿ** **ಪುಟ ೪೭-೬೩**

ಪಂಚಾಕ್ಷರ ಮಂತ್ರನಿರೂಪಣ, ಸಾನಂದ ಮೊದಲಾದ ಋಷಿಪುಂಗವರ ಕಥನ; ವಿಭೂತಿ ತತ್ತ್ವನಿರೂಪಣೆ, ರುದ್ರಾಕ್ಷಿ ತತ್ತ್ವನಿರೂಪಣೆ, ಪಾದೋದಕ ತತ್ತ್ವನಿರೂಪಣ, ಗುರುಜಂಗಮರ ಪಾದೋದಕ ಸ್ವೀಕಾರ ಕಥನ, ಪ್ರಸಾದತತ್ತ್ವ ನಿರೂಪಣೆ, ಗೃಹ್ಯಕಾರ ಮತ್ತು ಪತಂಜಲ ಮಹರ್ಷಿಗಳಿಂದ ಪ್ರಸಾದವರ್ಣನೆ, ಹರಗುರುಗಳಂತೆ ಜಂಗಮ ಪ್ರಸಾದ ಸೇವನೆಯು ಮುಕ್ತಿಗೆ ಕಾರಣವು.

**೫ ನೇ ಸಂಧಿ** **ಪುಟ ೬೩-೮೦**

ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರ ಗುಣವರ್ಣನೆ, ಅವರ ಶಿಷ್ಯೋಪದೇಶ, ಉಜ್ಜಯಿನಿ ಭಕ್ತರ ಅಪಾರ ಗುರುಭಕ್ತಿ, ಕೊಟ್ಟೂರಿನಲ್ಲಿ ಅಡ್ಡ ಪಲ್ಲಕ್ಕಿ ಉತ್ಸವ, ಪೂರ್ವದ ಗುರುಗಳ ಋಣತೀರಿಸುವಿಕೆ, ಈಗಿರುವ ಶ್ರೀಶೈಲ ಜ. ವಾಗೀಶ ಪಂಡಿತಾರಾಧ್ಯರು ಜಗದ್ಗುರುಗಳಾಗುವದನ್ನು ಅವರ ಬಾಲ್ಯಾವ ಸ್ಥೆಯಲ್ಲಿಯೇ ನಿರೂಪಿಸಿದ್ದು, ಉತ್ತರದೇಶಕ್ಕೆ ಪ್ರಯಾಣ, ಕಲಬುರ್ಗಿಯಲ್ಲಿ ಅಡ್ಡಪಲ್ಲಕ್ಕಿಯ ಉತ್ಸವ, ವಿದ್ಯಾನಿಲಯಗಳಿಗೆ ಮಾಡಿದ ಮಹಾದಾನ, ರಾಮ ಪುರ ಗ್ರಾಮದಲ್ಲಿ ಶಿವಭಕ್ತನ ಪತ್ನಿಗೆ ಹಿಡಿದ ಬೊಮ್ಮರಕ್ಕಸನನ್ನು ಭಸ್ಮದಿಂದೋ ಡಿಸಿದ ಮಹಿಮೆ.

**೬ ನೇ ಸಂಧಿ** **ಪುಟ ೮೧-೯೪**

ಕಾಶಿಯಲ್ಲಿ ಪಂಚಾಚಾರ್ಯ ಸಮಿತಿಗೊದಗಿದ ವಿಘ್ನ ಪರಿಹಾರ ಮಾಡು ವಿಕೆ, ಕಾಶೀ ವರ್ಣನೆ, ದೇಶಮಧ್ಯದಲ್ಲಿ ಅವರು ಮಾಡಿದ ಗುರುವರ್ಗಪ್ರಚಾರ ಮಳೆಗಾಲ ವರ್ಣನೆ, ಬಳ್ಳಾರಿಯಲ್ಲಿ ರುದ್ರಾಭಿಷೇಕವನ್ನು ಮಾಡಿಸಿ ಮಳೆತ ಸಿದ ಮಹಿಮೆ, ವಿದ್ಯಾವರ್ಧಕ ಫಂಡಿನ ಸ್ಥಾಪನೆ, ವೀರಭದ್ರಶಾಸ್ತ್ರಿಗಳಿಗಿತ್ತ ಆ ದೇಶವನ್ನು ತಿರುಗಿ ಗ್ರಹಿಸುವಿಕೆ, ಬಳ್ಳಾರಿ ಜಿಲ್ಹಾ ಹೊಸಪೇಟೆಯ ಸಮೀಪ ದಲ್ಲಿರುವ ಸಣ್ಣಾಪುರದಲ್ಲಿ ರಜಸ್ವಲೆಯಾದ ನಾರಿಯ ಸ್ಪರ್ಶದಿಂದ ಜಲರಹಿತವಾದ ಜಂಬುಕೇಶ್ವರ ಭಾವಿಯನ್ನು ದುಸ್ತರ ತಪಃಪ್ರಭಾವದಿಂದ ಜಲಭರಿತವನ್ನಾಗಿ ಮಾಡಿದ ಮಹಿಮೆ, ಬಳ್ಳಾರಿ ಜಿಲ್ಲಾ ಬೊಮ್ಮನಹಳ್ಳಿ ಗ್ರಾಮದಮುಳ್ಳುಗಳಿಯಮೇಲೆ ಕೂತು ದುಸ್ತರ ತಪಸನ್ನಾಚರಿಸಿ ಮಳೆತರಿಸಿದ ಮಹಿಮೆ, ಕೇದಾರಕ್ಷೇತ್ರದುದ್ಧಾರ

**೭ ನೇ ಸಂಧಿ** **ಪುಟ ೯೫-೧೧೯**

ಕರೆಸಿದರೂ ಬಾರದ ಚನ್ನಂಗಿ ಪರ್ವತಪ್ಪನು ಜಗದ್ಗುರುಗಳಿಗೆ ತೋರಿ ಸಿದ ಅನಾದರಣೆಗಾಗಿ ಕುರುಡನಾಗಿ ವಿಚಿತ್ರ ಹಿಂಸೆಗೊಳಪಟ್ಟು ಮೃತನಾಗುವಿಕೆ,

ರಂಭಾಪುರೀ ಜಗದ್ಗುರುಗಳ ಪಟ್ಟಾಭಿಷೇಕಕ್ಕಾಗಿ ದಯಮಾಡಿಸುವ ಸಮಯದಲ್ಲಿ ತೊಂದರೆಕೊಟ್ಟ ರುದ್ರಯ್ಯನ ದನಕರುಗಳು ಸಾಯುವಿಕೆ, ನಂತರ ರುದ್ರಯ್ಯನು ಪಶ್ಚಾತ್ತಾಪ ಪಟ್ಟು ಜಗದ್ಗುರುಗಳಿಗೆ ಬಿನ್ನ ಮಾಡುವಿಕೆ, ಬುಕ್ಕಾಂಬುಧಿಯಲ್ಲಿ ರಂಭಾಪುರೀ ಪೀಠದ ಪಟ್ಟಾಧಿಕಾರ ನಿಂತಿತೆಂದು ಕೇಳಿ ಆ ಊರ ಗುಡ್ಡದಲ್ಲಿ ಕಠಿಣ ತಪವನ್ನಾಚರಿಸಿ ರಂಭಾಪುರೀಪೀಠದ ಪಟ್ಟಾಧಿಕಾರವನ್ನು ಪೂರೈಸುವಿಕೆ.

## ೮ ನೇ ಸಂಧಿ — ಪುಟ ೧೧೫-೧೨೯

ಕತ್ತೆಬೇನೂರಿನಲ್ಲಿ ತೋರಿಸಿದ ಭಸ್ಮದ ಮಹಿಮೆ, ಮೈಸೂರಿನಲ್ಲಿ ಪಂಚಾಚಾರ್ಯಪ್ರಭಾ ಪತ್ರಿಕಾ ಪ್ರಕಟನೆ, ದಾವಣಗೇರಿಯಲ್ಲಿ ಧೂರ್ತರ ಗರ್ವಪರಿಹಾರ, ಕೊಟ್ಟೂರಿನಲ್ಲಿ ಸಂಸ್ಕೃತ ಪಾಠಶಾಲೆಯ ಸ್ಥಾಪನೆ, ಉಜ್ಜಯಿನಿಯಲ್ಲಿ ಜ್ಞಾನವೃಷ್ಟಿಯಿಂದ ಕಂಡ ಶಿವಾಲಯವನ್ನು ಪ್ರತ್ಯಕ್ಷ ತೋರಿಸುವಿಕೆ, ಬಳ್ಳಾರಿಯಲ್ಲಿ ಅಡ್ಡಪಲ್ಲಕ್ಕಿಯ ಉತ್ಸವ, ಒಂದೂರಿನಲ್ಲಿ ಉತ್ಸವ ತಡೆದ ಗೌಡನ ಬಣವಿಗೆ ಬೆಂಕಿಹತ್ತುವಿಕೆ, ಮಡ್ರಳ್ಳಿ ಕಾಡಿನಲ್ಲಿ ಬೀಗಮುದ್ರಿತವಾದ ಚೌಡೇಶ್ವರೀ ದೇವಾಲಯದ ಬಾಗಿಲವನ್ನು ಸ್ವತಃ ದೇವಿಯೇ ತೆರೆದು ಜಗದ್ಗುರುಗಳಿಗೆ ದರ್ಶನಕೊಡುವಿಕೆ, ಪಿಟ್ಲೀಲಿ ಜನಬಸವಯ್ಯನಿಗೆ ಮುಂದೆ ಹಾವುಕಡಿಯುವದನ್ನರಿತು ಆತನಿಗೆ ಹಾವಿನ ವಿಷಪರಿಹಾರದ ಬೇರನ್ನು ಕೊಟ್ಟುಕಳಿಸುವಿಕೆ, ಅನಂತಪುರ ಜಿಲ್ಹಾ ಪಾಲ್ಕುರದಲ್ಲಿ ಮತ್ತು ಸಂದೂರ ರೇವಣಸಿದ್ಧನ ಗುಡಿಯಲ್ಲಿ ಮಿತ ಪ್ರಸಾದದಿಂದ ಅಮಿತ ಜನರನ್ನು ತೃಪ್ತಿಪಡಿಸಿದ ಪ್ರಸಾದ ಮಹಿಮೆ.

## ೯ ನೇ ಸಂಧಿ — ಪುಟ ೧೩೦-೧೪೪

ಸೊಲ್ಲಾಪುರದ ವರ್ಣನೆ, ಬಾರ್ಶಿಯಿಂದ ಸೊಲ್ಲಾಪುರಕ್ಕೆ ಆಗಮನ, ಅಡ್ಡಪಲ್ಲಕ್ಕಿ ಉತ್ಸವ, ಭಕ್ತರಿಗೆ ಸದುಪದೇಶ ಮಾಡಿದ್ದು, ನಾರದ ಪಾಠಶಾಲೆಗೆ ಆಶೀರ್ವಾದ ಮಾಡುವಿಕೆ, ಅಲ್ಲಿಂದ ಉಜ್ಜಯಿನಿಗೆ ಪ್ರಯಾಣ, ಶಿವೈಕ್ಯ ಮುಂತಾದ ಮಹತ್ವದ ವಿಷಯಗಳು.





ॐ श्रीमदुज्जयनी सद्धर्म सिंहासनाधीश्वर श्री १००८ जगद्गुरु सिद्धलिंग शिवाचार्य
महास्वामीजी.

ಪರಮ ತಪಸ್ವಿಗಳಾದ
ಶ್ರೀಮದುಜ್ಜಯನಿ ಸದ್ಧರ್ಮ ಸಿಂಹಾಸನಾಧೀಶ್ವರ ೧೦೦೮
ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ
ಮಹಾಸ್ವಾಮಿಗಳು.

॥ ಶ್ರೀಮಜ್ಜಗದ್ಗುರು ಪಂಚಾಚಾರ್ಯೇಭ್ಯೋ ನಮಃ ॥

★ ಶ್ರೀ ಸಿದ್ಧಲಿಂಗ ವಿಜಯ ★







# ಪುರಾಣವು.

— —

## — ಒಂದನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ ॥ ಧರೆಯನುದ್ಧರಿಸಲನುಗೆಯ್ದ ಪಾವನಚರಿತ ।
ಕರುಣಾ ಸುಧಾರ್ಝುರೀಭರಿತನಯನಾಬ್ಜಯುಗ ॥
ಗುರುಸಿದ್ಧಲಿಂಗ ಭವಭಂಗನುದಿಸಿದನು ಭುವನದಿ
ಸಜ್ಜನರು ಜಯವೆನೆ ॥೦॥

ಶ್ರೀಮದಚಲಾತ್ಮಜಾಜಾನಿ ಸೋಮಧರವರ । ಕಾಮುಕಾನನ ದಾವಧೂಮಕೇತು ಮಹೇಶ ॥ ಭೀಮಾಂಧಕಾಸುರನಿಷೂದನ ಸರಸಿಜಾಸನಮುಖಸುರವಾರವಿನುತ ॥। ಹೇಮಭೂಧರ ಶರಾಸಾಂಚಿತಕರಾಂಬುಜನಿ । ಧಾಮನಿರ್ಜಿತಖಮಣಿಧಾಮ ಸುಮಶರಘ್ನ ॥ ಸ್ಸೀಮ ಮಹಿಮಾಕರಾರಿ ಭಯಕರ ಮಾಕರಪೊರೆ ಗಿರಿಜಾಪತಿಯೆನ್ನನು ॥। ೧ ॥

ಸಿರಿಯು ಸರಸತಿಯು ಸುರಪನ ಸುದತಿ ಮೊದಲಾದ । ಸು
ರಪುರಂಧ್ರಿಯರ ಸಿರಿದುರುಬುಗಳ ಗಂಧಕಿರ ॥ ಎರಗಿದ ಮರಿಷ
ರವೆಗಳ ರವರಮಣೀಯವಾದ ಚರಣ ಸರಸಿಜಯುಗೆಯೆ ॥ ಗಿ
ರಾಜವರಸುತೆಯೆ ಮೃಗರಾಜರಥಯುತೆಯೆ । ಪುರಹರನ ಹೃದ
ಯದಧಿದೇವತೆಯೆ ಮತಿತತೆಯೆ ॥ ದರಹಸಿತಲಸದಧರ ಜಿತವೌಕ್ತಿ
ಕಸ್ಫುರಿತವಿದ್ರುಮೆ ಶಿವೆ ಪೊರೆ ಯೆನ್ನ ॥ ೧ ॥

ಶಿವನಿರೂಪವನಾಂತು ಮರ್ತ್ಯದಿ ವಿರಾಜಿಸುವ । ಶಿವಲಿಂಗ
ಗಳಲುದಿಸಿ ಶಿವಮತವ ನೆಲೆಗೊಳಿಸಿ ॥ ಭವಹರನ ಬಕುತಿಯನು
ಭುವನದ ಮನುಜರ ಮಾನಸದೊಳಗೆ ತಿರಗೊಳಿಸುತೆ ॥ ಶಿವಕಲೆ
ಯ ತವರೆನಿಸ ಕುಂಭಭವಮುಖ್ಯನೆಗೆ । ನಿವರೇಣ್ಯರಿಗುಪದೇಶ
ವನಿತ್ತು ಭವಗೆಡಿಸಿ ॥ ತನೆಮುಕುತಿಯನಿತ್ತ ರೇವಣಾದಿ ಜಗದಾಚಾ
ರ್ಯರಕ್ಕೆ ಸುಫಲವರು ॥ ೨ ॥

ನರನಾಗರೂಪನಂ ಕರುಣಾಕಲಾಪನಂ । ದುರಿತೌಘನಾ
ಶನಂ ಭಜಕ ಸುಖಕೋಶನಂ ॥ ಪುರುಷಾರ್ಥ ದಾತನಂ ಗಿರಿಜಾ
ಸುಪುತ್ರನಂ ನಮಿಸುವೆ ಗಜವದನನನು ॥ ವರವೀರಭದ್ರನಂ ಗುಣ
ಮಣಿ ಸಮುದ್ರನಂ । ಸುರರಾಜಸೇವ್ಯನಂ ಪರಮರ್ಷಿ ಭಾವ್ಯ
ನಂ ॥ ಶಿರವರಿದು ದಕ್ಷನಿಗೆ ಕುರಿವಶಿಯನಿತ್ತನಂ ಮಣಿಮಣಿದು
ಸೇವಿಸುವೆನು ॥ ೩ ॥

ಪುಟ್ಟಿದೇಳನೆದಿನದಿ ತಾರಕಾಸುರಶಿರವ । ಕುಟ್ಟಿರಣ
ದಲಿ ಸುರರಿಗೊದಗಿದೆಡರುಗಳನುರೆ ॥ ಮೆಟ್ಟಿ ಪರಿಪಾಲಿಸಿ ವರಿ
ಷ್ಯನಹ ಸೇನಾನಿ ಷಣ್ಮುಖನೆ ಸಲಹೆಮ್ಮನು ॥ ಅಟ್ಟಹಾಸದಿ
ಖರ್ಪರಾದಿಯುಹ ಜೋಗಿಗಳ । ದುಷ್ಟಮದವನು ಕಳೆದು ಜಗ
ದಿಷ್ಟಸಜ್ಜನಗ ॥ ಶಿಷ್ಯರನು ಪಾಲಿಸಿದ ಸಿದ್ಧರಾಮನಭಿರಾಮನಿ
ರಲಿ ಮಾನಸಿನಲೆನ್ನ ॥ ೪ ॥

ವೀರಗೋತ್ರದಧಿದೈವನೆನಿಸಿ ವಿರಾಜಿಸುವ । ವೀರಸಿಂಹಾಸನಾಲಂಕಾರತಾನಾಗಿ ॥ ವೀರಶೈವ ಮಹಾಮತಸ್ಥಾಪನಾಚಾರ್ಯನೆನಿಸಿ ದೇಶದೊಳು ಭರದಿ ॥। ಸಾರಿಸುತೆಬಿರುದಾಳಿಯಿಂ ಸ್ವಪ್ರತಾಪವನು । ಪಾರಿಸುತೆ ಪರವಾದಿಗಳ ಗರ್ವಧೂಳಿಯನು ॥ ಭೂರಿತೇಜದಿ ಜಗದಿ ಮೆರೆದಿಹ ಶಿವಾನಂದ ಗುರು ವಾಳ್ಕೆ ಸಿದ್ಧಿಯನ್ನು ॥। ೬ ॥।

ಸೂಗೂರು ಮಠವಿಟಪಿ ಸುರಭಿಸುಮನೆನಿಸಿರ್ದ । ಭೋಗಿಭೂಷಣ ಭವ್ಯ ಭಕ್ತಿಭಾಸುರ ಹೃದಯ ॥ ಭೋಗವುಳ್ಳವರಲ್ಲಿ ಭಾಗ್ಯಶಾಲಿಯನಾದ ವೀರೇಶ ವರಜನಕನ ॥। ನಾಗವೇಣಿಯರ ನಾಕಪದವಿಯನೀವ ಗುಣ । ಯೋಗದಿಂದುಂಟಾದ ಧವಲಕೀರ್ತಿಭರಿತೆಯ ॥ ಕೋಗಿಲದನಿಯಳಾದ ವೀರಮಾಂಬೆಯುಭಯರಡಿಗಳಿಗಾನತನಪ್ಪೆನು ॥। ೭ ।।

ವೈಣಿಕಾಗ್ರೇಸರನು ತನ್ನಯ ಶೃತಿಬದ್ಧ । ವೀಣೆಯನು ನುಡಿಸುವಂತೆನ್ನ ಹೃದಯದೊಳಿದ್ದ ॥ ಜಾಣನಹ ಜಗದಾರ್ಯಸಿದ್ಧಲಿಂಗಯಮಿ ಪುಂಗವನು ನುಡಿಸಿದಪರಿಯಲಿ ॥। ಮಾಣದಲೆ ನುಡಿವೆನದರಿಂದಪ್ಪು ತಪ್ಪುಗಳ । ಕಾಣುವದರಲ್ಲಿ ಬಲುಕಾಣನಿರುವೆನು ಬುಧರೆ ॥ ಮಾಣವಕ ಕೃತಿಯೆಂದು ಕೇಣನಿಲ್ಲದೆ ತಿದ್ದಿ ಕಾಣುವದೊಳಿತವನಿಹದಿ ॥। ೮ ॥।

ಶಿವನೊಲಿಸಿ ಶಿವನ ರೂಪವನಾಂತು ಶಿವನ ಚಂ। ದವನು ಕರಿಸುವ ಗಣವರೇಣ್ಯರನು ನುತಿಸದಲೆ ॥ ಭವಭವದಿ ಬಂದಳಲಿ ಬಳಲುತಿರುವ ನರರಂ ದಿವಿಜಕೋಟಿಗೆಳೆದೆಳೆದು ॥। ದಿವಿಜಪತಿ ಭುವನಪತಿ ನೀನೆಂದು ನುತಿನುತಿಸಿ । ಯವರನನುಸರಿಸುವವರು ಮನೆಯಹಕ್ಕೆಯಲಿ ದೇ.॥ ವವನಗೋವಿರಲು ಖರಖರಿಯ ಹಿಂಬಾಲಿಸುವರಂತೆ ನಿಷ್ಫಲರಹುದಲ ॥। ೯ ॥।

ಅಸಮನಯನನ ಸದೃಶಪದಯುಗದಿ ಮಿಸಲಾ । ಗಿಸಿ
ರಸನೆಯುನನ್ಯ ಜಡದೇಹಿಗಳ ನುತಿಗೆ ॥ ವಶಗೊಳಿಸದಸಮ ಕ
ಗಳೆನಿಸಿ ರಸೆಯಲಿ ಮೆರೆದೆಸೆದಿಹ ಪುರಾತನರಹ ॥। ಲಸದನಘ
ಘವಾಂಕ ಹರಿಹರ ನಿಜಗುಣ ವಿ । ಲಸಿತ ಮಲುಹಣ ಷಡಕ್ಷರಸ
ಗುಣ ಶಿವಯೋಗಿ ॥ ಮಿಸುಪನೀಲಗಲ ಮೊದಲಾಗಿಹ ಕವಿಗಳ
ಕವಿತಾಶೈಲಿಯನ್ನೀಯಲಿ ॥। ೧೦ ॥।

ಶ್ರೀಸಿದ್ಧಲಿಂಗವಿಜಯಾಖ್ಯೆಯೀಕೃತಿಯನಾ । ಮೀಶ
ಕೃತಿಗೊಡೆಯನು ಸಿದ್ಧಲಿಂಗಮುನಿಪನು ॥ ಲೇಸೆನಿಸುವೀಕೃತಿಯ
ಪಾಲಕರು ಗುರುಕೃಪಾಪಾಲಕರೆನಿಪ ಸುಜನರು ॥। ಬೇಸರಿಸದೆ
ಕೃತಿಯನುಸುರಿದವ ವಸುಧೆಯೊಳ । ಗೀಶ ಪದಕಮಲ ಪೂಜ
ವೀರಶೈವ ವರ ॥ ಭೂಸುರ ಪರಮವೀರಗೋತ್ರಜನಿತ ಕುಲಪ
ಜಗದೀಶ ವಿಬುಧೇಶನು ॥। ೧೧ ॥।

ಶ್ರೀವೀರಶೈವ ಗುರುಕುಲವನೆಲೆಗೊಳಿಸಿರುವ । ನಾವನು
ಗುರುವಂಶಕುಪಕೃತಿಯನೆಸಗಿರುವ ॥ ನಾವನಾಧ್ರುವನಂತೆ ಬಾಲ್ಯ
ದೊಳು ಕಠಿಣತರ ತಪವನಾಂತೀಜಗದೊಳು ॥। ದೇವತಾಸತ್ಕೃ
ಪೆಗೆಪಾತ್ರನಾಗಿಹನು ಮ । ತ್ತಾವನಲಿ ಬಿಡದೆ ದೈವೀಕಲೆಯು
ನೆಲೆಸಿರುವ ॥ ದಾವಿಬುಧ ವರಚನ್ನವೀರನಾದೇಶದಿಂದೀ ಕೃತಿಯ
ನಾಂ ಪೇಳ್ವೆನು ॥। ೧೨ ॥।

ಮೇರುಭೂಧರ ದಕ್ಷಿಣಾಶಯೊಳಗೋರಂತೆ । ತೋರುತಿಹ
ಭಾರತಧರಾಂಬೆಯ ಸುರುಚಿರಮುಖ ॥ ಸಾರಸದೊಲು ವಿಶೋಭಿ
ಸುವ ಕನ್ನಡದನಾಡು ಸಜ್ಜನರ ಸುಖದ ಬೀಡು ॥। ಸಾರಗಂಧಕ್ಕೆರಗಿ
ನೊರೆವ ಮರಿದುಂಬಿಗಳು । ದಾರರವ ರಮಣೀಯ ಕನಕ ವಾರಿ
ಗಳುರು ॥ ವಾರದಿಂದೊಪ್ಪುತಿಹ ತೊರೆಗಳಿಂ ಕೆರೆಗಳಿಂದ ವಿರಾ
ಸುವದು ಸತತ ॥ ೧೩ ॥

ಪೂತಸುಮಲತೆಗಳಿಂ ಯುತವಾದ ತತವಾದ । ಕಾತಪಣ್ತಿ
ರುವಾರ ವೀಥಿಗಳ ತತೆಯಿಂದ ॥ ಬೀತವಲ್ಲದುಪವನಗಳು ಬನಗಳು
ಬೆಳೆಗಳ ಕಳೆಯಿಂದ ನೆರೆ ಪೊಲಗಳು ॥। ಶೀತ ಸಲ್ಲಲಿತ ಮಾಧುರ್ಯ
ಭರಭರಿತ ಜಲ । ಪೂತ ವಾಪೀಕೂಪಗಳು ಕಾಲುವೆಗಳು ಸಲೆ ।
ಪಾಂಥರಿಗತಿ ಹಿತವೆನಿಪ ಪ್ರಪಾಶಾಲಿಗಳಿರುವವಲಾ ನಾಡಿನೊಳಗೆ
॥। ೧೪ ।॥

ನೀರಿಗಾಗಿ ಬರುತಿಹ ನೀರೆಯರ ಸುಘನ ಪೊರ । ವಾರದಲಿ
ರುವ ಕಲಶಗಳನೇಕಗಳ ಕಂಡು । ಧೀರತನದಿರವಡಗಿ ಮನದಿ ಭೀತಿ
ಯುಮುಡಗಿ ನಿಮ್ನಗೆಯು ರೋದಿಸುವಳು।॥ ಆರನಾಂ ಮೊರೆಪೊಗಲಿ
ವರ ಮಗನೆನಿಪ ಮುನಿಯ । ಪಾರಜಲಮುಳ್ಳ ಮನ್ಮಾನಸಪ್ರಿಯ
ಸನೊ । ಚ್ಯಾರಿಯಲಿ ಪೀರ್ದನಿವರೇನು ಮಾಳ್ಪರೆನಗೆನುತುಲಿವ
ತೆರೆಗಳ ನೆವದಲಿ ॥। ೧೫ ॥

ಸ್ವರ್ಣದಿಯ ಸಹಧರ್ಮ ಭಗಿನಿಯೆಂದೆನಿಸಿ ತಾಂ । ಸ್ನಾನ
ದಿಂ ಪಾನದಿಂ ಭೂವಲಯುದಲ್ಲಿರ್ದ ॥ ಮಾನವರ ಕೋಟಿಯನು
ಪಾವನವ ಮಾಡುತಿರುವನಘ ಮಹಿಮಾಂಚಿತೆ ಸುರ ।॥ ಧೇನುವೋ
ಲ್ ಸ್ವಾಪತ್ಯವೆನಿಪ ಕಾಲುವೆಗಳಿಂ । ದಾನಿಸುತೆ ದೇಹಿಗಳ ಮಾನ
ಸಾಭೀಷ್ಟಗಳ ॥ ದಾನಗುಣಕಾಲಯವೆನಿಸಿದ ಕಾವೇರೀ ನದಿಯು
ವಿರಾಜಿಸಿದುದಲ್ಲಿ ।॥ ೧೬ ॥।

ನೆರೆ ಬಿರಿದ ನೂರಾರು ಸರಸಿಜಾತಗಳು ಮುಖ । ಸರಸಿಜಾಳಿಗ
ಳಾಗಿರಲು ನೀಲನೀರಜಗ ॥ ಳಿರೆ ನೀಳ್ಪಕಂಗಳುಗಳು ತಾನಾಗಿ ಬಿಸ
ಲತೆಗಳಿರೆ ಸುದೀರ್ಘ ಭುಜಂಗಳು ।॥ ಸಿರಿಯ ಕೈಪಿಡಿಯಂತೆ
ನಿರುತ ನಿರ್ಮಲವಾದ । ಸರಸಘನ ಸಲಿಲದಲಿ ಕಮಲಗಳ ಪಡಿನೆ
ಳಲು ॥ ಚರಣಸಾಸಿರಗಳಾಗೆ ತರಂಗಿಣಿ ವಿರಾಟನನುಕರಿಪವೊಲು
ತೋರಿತು ।॥ ೧೭ ॥।

ಅಳಿಗಳಿಂದಸಿತಾಂತರಾಳದಿಂ ಕೂಡ್ದ ಮು । ತ್ತೈಳಿನಗೆಯ ತೀ
ಗದಿರದಂತತಿ ಧವಳೆನಿಪ ಕ ॥ ಮುಳಗಳ ಕುಳಗಳ ಛಳದಿಃ ಕವೇ
ಧರಾಧರ ವರತನೂಭವೆಯು ತಾನು ।॥ ವಿಳಸನ್ನಿಜಪತಿ ಜಳನಿಧಿ
ಕಜ್ಜಳದೊಲಿರುವ । ಮಳಿನವಾಂತ ಶಶಿಯೋರ್ವನೊಳಗೊಂಡಿ
ತಿಹನು ॥ ತಿಳಿಯೆ ನಾನಂತಲ್ಲನೇಕ ಶಶಧರಗಳನೊಳಗಿರಿಸಿಹೆನೆಂದು
ಲಿವದು ।॥ ೧೮ ।॥

ಸಾತಿಶಯುಮಾಧುರ್ಯವೀ ತೋಯದೊಳಗುಂಟು । ಶೈತ್ಯ
ಥಾವಲ್ಯಗುಣಗಳು ಕೂಡಿದರಲುಂಟು ॥ ಏತರದ ಕೊರತೆಯಿಲ್ಲದ
ರಿಂದ ಲೋಕರೀತಿವಿದರಾದ ದಿವಿಜರರೆ ।॥ ಆತುರದಲೀಪ್ರೂತ ಸಯ
ವನುಗ್ರಹಿಸಿ ವಿ । ಖ್ಯಾತನಿರ್ಜರರಾಗಿರೆಂದು ಕಾವೇರಿ ತಾಂ।
ದೂತರನು ಕಳುಹಿಸಿದಳೆಂಬಂತೆ ಫಲವುಳ್ಳ ತೆಂಗ್ಬೋಟನೆಸೆದುದಲ್ಲಿ
।॥ ೧೯ ।॥

ನೀಲಾಬ್ಜ ವಲ್ಲಿಗಳ ಜಾಲಗಳ ಮಂಡಲದ । ಲೋಲಸಿತ ಶ
ಪತ್ರವಿತತಿಗಳ ಖಂಡಗಳ ॥ ಮೇಲಾದ ನೆವದಿಂದೊಳಗಿಹ ವಿ
ಶಶಿಗಳನು ದೂಡುವಂತಿದೆ ತಟನಿಯು ।॥ ಕೀಲಾಲಪೂರದೊಳು ಪ
ನೆಳಲಿನ ತೆರೆಗಳ । ಚಾಲನಕೆ ಚಲಿಸುತಿಹ ತತ್ಸರಿತ್ತೀರತರು ।
ವಾಳವಹ ಜಲಧಿಯೊಳು ರೆಕ್ಕೆಗಳ ಝಾಡಿಸುವ ವೈನಾಕನನುಕ
ಸಿತು ।॥ ೨೦ ।॥

ಕರೆದಾವರೆಗಳ ಬನಗಳ ಸಾಲು ಕರಿಯಂಚು । ಪರವೆಗಳ
ಬುಗುಡಿ ಸಲೆ ಚಲಿಸುವರ ಸಂಚೆಗಳು ॥ ವರಚಿತ್ರಗಳಿರುತಿರೆ ಧ
ಯ ಹರಿದಂಬರದತೆರ ಗರ್ದೆಗಳವಿಪ್ಪುವು ।॥ ಅರಗಿಳಿಗಳಿರದೆ ತಾ
ರಭರನಿಳಿದೊಳಗಿನ । ಸರಸಹ ದೆನೆಗಳ ರಸವನು ಪೀರ್ದು ನ
ಗಳ ॥ ನಿರದೆ ಪೀಡಿಪವೆಂದು ಜಲವೊಕ್ಕವೊಲು ಪಡಿವೆಳಲಿನಿಂ
ತೋರಿದವವು ॥ ೨೧ ॥

ತಾವರೆಗೆಳೆಸಲುಗಳ ಕೆಂಗದಿರಿನಿಂದೆಸೆವ । ಭಾವಹರ ಬಿಸಿನಿಗಳೆ ಹೊಳಪಿನಿಂ ಪಸರೆನಿಪ ॥ ಭಾವಿಸಲು ಗಂಧಶಾಲಿ ಕಣಶಂಗಳ ಪಾಕದಿಂದ ಪಿಂಗಟವಾಗಿಹ ।॥ ಭಾವಜನ ಕೈಪಿಡಿಯತಲದಂತೆ ವಿಶದವಾ । ದಾವಪ್ರಗಳ ಜಲವು ರಾಜಿಸಿತು ಕಾನನದಿ ॥ ಭೂವರಿಯೆ ಕರಗಿದ ಸುರವಿಭುವಿನ ಬಾಣಾಸನದ ಸದ್ಪ್ರವವಿದೇನೆನೆ ।॥ ೨೨ ।॥

ಹೊಳೆಗಳಿಂ ಸುಳಿಗಳಿಂ ದಳಿಗಳಿಂ ರಂಜಿಸುವ । ನಳಿನಗಳ ಕೊಳಗಳಿಂದತಿ ಕಂಪನಾಂತು ಬಳಿ ॥ ಸುಳಿವ ತಂಗಾಳಿ ಯಿಂದೊಲೆವೆಳೆಯ ಬಳ್ಳಿಗಳ ಜಾಲಗಳ ಶೋಭೆಯಿಂದ ।॥ ತಳತಳನೆ ಹೊಳೆಯುತಿಹ ಸೋಪಾನ ಸಾಲ್ಗಳಿಂ । ಗಳಿಲನುರೆ ಪಾರ್ವ ಸನ್ಮೀನಗಳ ತಂಡದಿಂ ॥ ದಳವಡಿಸಿ ಕಂಗೊಳಿಪ ಸಾರ ಕಾಸಾರಾವಳಿಗಳಿಂದ ಶೋಭಿಸಿದುದು ॥। ೨೩ ।॥

ಸಾರತರ ಸುರಭಿ ಸುಮದೇಳ್ಗೆಯಿಂ ಸರಸಫಲ । ಪಾರದಿಂ ಮರಗಳುಂ ಚಿಗರಿನಿಂ ಲತೆಗಳುಂ ॥ ಕೀರಗಳ ಮಧುರತಮವಾಣೀವಿಹಾರದಿ ನುದಾರ ಪರಪುಷ್ಪಗಳುರು ॥। ಪಾರದಿಂಚರಗಳಿಂ ಬನಗಳುಪವನಗಳುಂ । ಭೂರಿ ತಂಪೆಳೆಲಿಂದ ಮಳಲಿಂದ ದಾರಿಗಳು ॥ ಕೂರ ಶಾರ್ದೂಲಾದಿ ಪಶುಗಳಿಂ ಕಾಡುಗಳು ತೋರುತಿಹವಾನಾಡೊಳು ।॥ ೨೪ ॥।

ಶಿವನಿಕೇತನವಿಲ್ಲದಿಹ ಪುರವು ಪರಿಕಿಸಲು । ಭವಹರಂ ಭಸಿತವಿಲ್ಲದ ನಿಟಿಲ ರಾಜಿಸುವ ॥ ಶಿವನಾಮವ ಮರೆದೊಮ್ಮೆಯು ನುಡಿಯದಿರುವ ಮೂರ್ಖಮನುಜನು ಭೂವಲಯದಿ ।॥ ಪವನನಂದದಿ ಪರೋಪಕೃತಿಯನೆಸಗದವನು । ಭವಭವದಿ ಬರಿಸುತಿಹ ದುರಿತಕರ್ಮವ ಮೂಳ್ಪ । ವವನು ಬಹುಶವಿರನೆಂದರತಿಶಯವೆನಿಸದಾದೇಶವದೊಳಗೆಲ್ಲಿಯು ಗಡ ॥ ೨೫ ॥

ಮಡಿಯೆಂಬರಾ ತೊಳೆದ ವಸನವನು ಕಬರಿಯನು । ಮು
ಯೆಂಬರುದರ ದೇಶವನು ಪೊಡೆಯೆಂಬುವರು ॥ ಕೊಡೆಯೆಂಬ
ತಪತ್ರವನು ಸಲೆ ಸುರಿವ ಮಳೆಯನು ಜಡೆಯೆನುವರು ತಿಳಿಯೆ ॥
ಕಡೆಯೆಂಬುವರು ಮಂಥನವ ಮಾಡೆನುವದನಾ । ರಡಿಯ
ಯೆಂಬರು ತಟನಿಯನು ತೊರೆಯೆನುವರು ॥ ಕುಡಿಯೆಂಬರು ಲ
ಗ್ರವನು ಶಿಲೆಯನರೆಯೆಂಬರಿವನುಳಿದು ನುಡಿಯರಲ್ಲಿ ।॥ ೨೬ ॥

✓ ಬಡತನವು, ಕುಟಿಲತನ, ವೆಡೆಬಿಡದೊರೆಸ್ಯಾಟ । ಕಡು
ಣತನ, ಮೂಂದ್ಯವೆಂಜಿನಾದೇಶದೊಳು ॥ ಮಡದಿಯರ ನಡು
ಕುರುಳು, ಕುಚಕಲಶಮಧ್ಯ, ಕುಚ, ಗತಿಗಳಿಲ್ಲೆಲ್ಲದಿಲ್ಲ ।॥ ದ
ನಿಗಡ ಬಂಧನವು ಮದವು ಶ್ರುತಿಚಪಲತೆ । ಯಡಿಗಡಿಗೆ ಹರಿ
ಹಗೆತನವು ಮತಿಹೀನತೆಯು ॥ ಬಿಡದಿಹುದು ಗಜಘಟೆಗಳಲ್ಲಿ
ದಿಲ್ಲವುಕರಂ ನಾಡೊಳಿಲ್ಲಿಯು ಗಡ ।॥ ೨೭ ।॥

✓ ಮುಖವೆ ಮೊದಲಾದ ದೇಹಾಂಗಗಳ ನಡುವೆ ಪ್ರ । ಮು
ವಾಗಿ ಸುಮನೋಹರವೆನಿಸುತಿಹ ಕಟಿಯವೋ ॥ ಅಖಿಲ ಪುರ
ಮಧ್ಯಮಣಿಯೆನಿಸಿ ರಾಜಿಸಿತು ಬಂಗಾರ ನಾಯಕಳ್ಳಿ ।॥ ಸ
ಸೌಭಾಗ್ಯದಾಗರವೆನಿಸಿ ರಸಿಕಜನ । ನಿಕರದ ಸುಖದ ಸುಗ್ಗಿತಾ
ಸಿ ವಿಬುಧವರ ॥ ರಕಲಂಕಕೀರ್ತಿ ಶಶಿಸುಷುಮಾವಿಭೂಷಿತವೆ
ತಿಳಿಯೊಳಾಪಳ್ಳಿಯು ।॥ ೨೮ ।॥

ಅದು ನಾಕಲೋಕವೋಲ್ವಿಬುಧರಿಂ ಧನದರಿಂ । ದದು
ಸದನದಿಂದ, ವರಕುಂಡಲಿಗಳಿಂದ ॥ ಅಧರ ಭುವನದಪರಿ
ವಿರಾಜಿಸಿತು ನೆರೆನೋಳ್ಪ ರಸಿಕರ ಮನಸಿಗೆ ।॥ ಅದು ಸಕಲ ಸು
ನಸ್ಸುಸೇವ್ಯ ಮಾದರದನೋಳು । ಮಧುಪಗಳ ಪೆಸರಿಲ್ಲ ದಾಕ್ಷಿಣ್ಯ
ಯೆನಿ ॥ ಸಿದರದು ದಶವದನನ ರಾಜಧಾನಿಯೆನಿಸದು, ಭುವ
ಳಗೆ ವಿಚಾರಿಸೆ ।॥ ೨೯ ।॥

ಕಾಸಾರದಂತೆಸೆವ ಕನಕನಾಯಕನಳ್ಳಿ । ಯೋಳ್ಳಾಸಿರೆಸಳಂತೆ ಸೌಂದರ್ಯದಿಂದ ಪ್ರ ॥ ಕಾಶಿಸುವ ದೊಡ್ಡ ಮಠದೊಳಗೆ ರಾಜಮರಾಳವೋಲ್ಸತತ ರಾಜಿಸುತ್ತೆ ॥ ವಾಸವಾಗಿರುತೊಪ್ಪಿದನು ವೀರಶೈವ ವರ । ಭೂಸುರ ಕುಲೋತ್ತಂಸ ವಿದ್ಯಾವಿಶಾರದನು ॥ ಭಾಸಮಾನ ಯಶೋ ವಿಶಾಲನೆನಿಸುವ ಚನ್ನಬಸವನೆಂಬ ಮಹೇಶನು ॥ ೩೦ ॥

ಅನ್ಯರಿಂತವರೆಂಬ ವಿಜ್ಞಾನವಿರುತಿರಲಿ । "ಕನ್ಯೊಷಿತಾಪಿ ವಚನಂ ಮಾವದೇ" ದೆಂಬ ॥ ಮಾನ್ಯವಾಕ್ಯದಿ ಮೌನ, ಶಕ್ತಿಯಿರುತಿರೆ ಶಕ್ತಿ ಸಮವೇತನು "ಕ್ಷಮೇ" ತಿ ॥ ಚನ್ನೆಸೆವ ತಾಳ್ಮೆ ಮುತ್ತುರುತರ ವಿತರಣವಿರೆ । ತನ್ನ ಹೊಗಳದಿಹ ತನವೀಯಾರು ಸುಗುಣಗಳು ॥ ಮುನ್ನಿನವಿರೋಧವಂ ಬಿಟ್ಟು ಸೋದರಗಳಂತಿಹವು ಚನ್ನಬಸವನೊಳು ॥ ೩೧ ॥

ಶಿವಪಾದ ಪಂಕೇಜಯುಗಮತ್ತ ಮಧುಕರನು । ಶಿವನಾಮ ಜಪಜಾತ ರವರಂಜಿತಾನನನು ॥ ಶಿವನುತಿಶ್ರವಣದಿಂ ಪರಿಪೂರ್ಣಕರ್ಣನುಂ ಸುಗುಣಮಣಿ ಗಣಶರಧಿಯು ॥ ಶಿವಭಸಿತರೇಖಾತ್ರಯೋಜ್ವಲಿತ ನಿಟಲದಿಂ । ದವನಿಧರ ದೃಷದುಪರಿ ಮೂರುತೆರದಿಂ ಪರಿವ ॥ ದಿವಿಜ ತಟಿನಿಯ ಸುಭಗತರ ಸಿರಿಯ ಜಯಿಸಿದನು ವೀರಮಾಹೇಶ ಮಣಿಯು ॥ ೩೨ ॥

ಅಕಲಂಕವದನ ವಿಧುಕಾಂತಿಯಿಂ ಪ್ರಿಯತಮನ । ಸುಖಕರನಯನ ಚಕೋರಯುಗವನತಿ ತಣಿಪುವ ॥ ಮಕರಕೇತನ ವಿಜಯಸದ್ಧ್ವಜವೆನಿಸುತಿಹ ಸರೋಜದಲ ದೀರ್ಘಾಂಬಕಿ ॥ ಅಕುಟಿಲಮತಿಯುತೆ ಸಚ್ಚರಿತೆ ಪತಿದೇವತೆ ಸು । ಸಖಿಜನರ ನಿಕರದೊಳು ಸದ್ಯಶಃಪ್ರ ವಿಲಸಿತೆ ॥ ನಿಖಿಲಗುಣರನ್ನೆ ಗುರುಸಿದ್ಧಮ್ಮನೆಂಬುವಾತನ ಸತಿಯು ಶೋಭಿಸಿದಳು ॥ ೩೩ ॥

ಹಣೆಯುಗುರು, ಕಿವಿಯುಗುರು, ಕಂಣುಗುರು, ಪರಿಕಿಸೆ । ತ್ರಿ
ಣಯನಂ ಪೂಜಿಸುವ ಭಕ್ತಿಯದುತಾಗುರುವು ॥ ಮಣಿಬಂಧ ಮೊದ
ಲಾದ ಪೂಜ್ಯಾಂಗಗಳು ಮತ್ತೆ ಗುರುಗುರುಗಳಾಗಿರುತಿರೆ ॥। ಅಣಿಕಿಸು
ತ ದೇವಕನ್ಯೆಯರ ಲಾವಣ್ಯವನು । ಗುಣರಾಶಿಯಿಂ ಸಿದ್ಧಳಾಗಿರ್ದ
ಕತದಿಂದ ॥ ಮಣಿದು ಗುರುಸಿದ್ಧಮ್ಮನೆಂಬ ನಾಮವು ತಾನೆಯಾವ
ರಿಸಿದಂತೆಸೆದಳು ॥। ೩೪ ॥।

ಕೋಕದಂಪತಿಗಳಂತನುರಾಗಯುತರಾಗಿ । ಲೋಕಾತಿಶಯ
ಮೆನಿಪ ದಾಂಪತ್ಯ ಸಾಮ್ರಾಜ್ಯ ॥ ದೇಕಾಧಿಪತ್ಯ ಸುಖವನು ಬ
ಹುಮುಖದಲಿಯನುಭವಿಪ ಪುಣ್ಯಶ್ಲೋಕರು ॥। ಕಾಕುಮನದವ
ರಾಗದೆ ಶಶಲಾಂಛನ ಖಂಡ । ಶೇಖರನ ಶರಣರಡಿದಾವರೆಗಳನು
ಭವದಿ ॥ ಕಾಕುಲತಿಯಿಂ ಭಜಿಸುತ ದಿನದಿನದೊಳು ಪರೋಪಕ್ಕಾ
ಯನೆಸಗುತಿರ್ದರು ॥। ೩೫ ॥।

ತನಯನೋರ್ವನು ಮರುಳಸಿದ್ಧಾರ್ಯನೆಂಬುವನು । ಜನಿ
ಪಲವತ್ಸರಗಳುರುಳಿ ಪೋಗಿರೆಯುವರು ॥ ವಿನಯ ವಿದ್ಯೆಗಳ
ವಿಧಿಯುರು ಶ್ರದ್ಧೆಯೊಲು ಭೂಷ್ಯಭೂಷಣರಾಗುತೆ ॥। ವಿನಯದಿ
ಗುರುಲಿಂಗಜಂಗಮರ ಪೂತಪದ । ವನಜಗಳನುರುಬಕುತಿ ಭಾವ
ಭಜಿಸುತೆ ಸುಖ ॥ ವನುಭವಿಸುತಿರಲೊಂದುದಿನದ ರಾತ್ರಿಯಲಿ ಸು
ಸುಪ್ತಿಯೊಳಿರುವ ಸುದತಿಯು ॥। ೩೬ ॥।

ಕನಸಿನೊಳು ಗುರುವರೇಣ್ಯನ ಸರೂಪವನು ತಾಂ । ಮನ
ಜಾಂತಕನು ಧರಿಸುತೆ ಹರುಷದಿಂ ಬರಲು ॥ ವಿನಯದಿಂ ಪದಕೆರ
ಶಿರಬಾಗಿ ನಿಂತಿರುವ ಗುರುಸಿದ್ಧದೇವಿಯುಡಿಯೊ ॥। ಅನುಪಮ
ಲಾಭರಿತರಾಕಾಶಶಾಂಕನನು । ಮಿನುಗುವ ಕರಾಂಬುಜಗಳಿಂದಿತ್ತು
ಕೃಪೆಯಿಂದ ॥ ಘನಮಹಿಮ ನೀಲಗಲನು ಮರೆಯಾಗುತಿರೆ ಸ
ಸಿಜ ವದನೆ ಎಚ್ಚತ್ತುರೆ ॥। ೩೭ ॥।

ಕಂಡುದಂ ನಾನಿದಂ ಕನಸು ಕನಸಲ್ಲವೋ । ಖಂಡಿತವು ನಿದ್ದೆ ಗೈದೆನೊ ಯೆಚ್ಚರಿರುವೆನೋ ॥ ಖಂಡೇಂದು ಶೇಖರನೆ ಬಲ್ಲನಿದ ನೆಂದು ಮನದೊಳು ಸಂಭ್ರಮವನು ತಳೆದು ॥। ಗಂಡನಿದ್ದೆಡೆಗೈದಿ ಮಲಗಿಹನನೆಬ್ಬಿಸುತೆ । ಪುಂಡರೀಕಾಕ್ಷನಿಗೆ ಕಂಡುದನುಳಿಸ ದಂತೆ ॥ ಮಂಡಿಸಿದಳದನನುತಿಳಿದು ಫಲವದು ಸಟೆಯಲ್ಲೆಂದು ಪತಿ ನುಡಿದನಾಗ ॥। ೩೮ ॥।

ಪಾರೆಬಲಗಣ್ ಜಗದ ಗುರುಜನದ ವೈರಿಗಳ । ಪಾರೆ ಧೈರ್ಯವಿನಿತಿಲ್ಲದ ಹಾಗೆ ಸಜ್ಜನರ ॥ ಸಾರವೋದಾಂಬುಧಿಯು ಮೇರೆವರಿಯೆ ಬ್ರಹ್ಮಚರ್ಯದ ಸಲೆ ಕಳೆಯೇರೆ ॥। ತೋರೆ ಪೂಗಣಿಯಗೆ ದುಗುಡು ಮಾಯೆಯ ಬಲುಬಲ । ನಾರೆ, ಬಕುತಿಯು ವಿಜಯ ರವ ಬೀರೆ, ಭರದಿಂದ ॥ ವಾರಿಜಾಕ್ಷಿಯುಹ ಗುರುಸಿದ್ಧಮ್ಮನು ಧರಿಸಿದಳು ಶುಭದಿನದೊಳು ಗರ್ಭವ ॥। ೩೯ ॥।

ಸೊರಗೆ ತನುಲತೆಯು ಕಾಂತಿಯುಲಿ, ಮುಖಮಂಡಲವು । ಭರಭರನೆ ಮಲ್ಲಿಗೆಯ ಪೂದಂತೆ ಬಿಳ್ಪೇರೆ ॥ ಯಿರದೆ ಸಲೆತೋರೆಯಾಭರಣಗಳೆರಡು ಮೂರು ಕಾಯುಲತೆಯೊಳ್ಗು ತರುಣಿಯು ॥। ಕಿರಣಗಳ ಕಾಂತಿಯತ್ಯಲ್ಪದಿಂದ ಬಿಳುಪಾ । ಗಿರುವ ವಿಧುವಿರಲರಸುವಷ್ಟತಿವಿರಲಿರುತಿಹ ॥ ವರತಾರೆಗಳು ಹೊಳೆಯೆ ಬೆಳ್ಪಗೆ ಬೆಳಗಹ ರಜನಿಯೋಲಲದೇನೊಪ್ಪಿರ್ದಳೊ ॥। ೪೦ ॥।

ಇನಿತಾದರಾಶೆಯಿಲ್ಲದ ಘನತರ ಮಹಿಮೂಂ । ಕನ ವಸತಿಯಿಂದಲೇನೆನೆ ಬಸುರಿನ ಬಯಕೆಯ ॥ ದಿನಗಳವು ತಾವುಸರದೆ ಜಗುಳಲ್ಕೆ ಪೊಸಪೊಗರಿನತಿಶಯದಿಂ ತಳತಳವೆನಿಪ ॥। ವನಿತೆಯ ತನುವವಯವದಿಂದಲಿ ವಸಂ । ತನ ಕಾಲದೊಳು ಪಣ್ಣೆಲೆಗಳುದರಿ ಚಿಗುರನಿಂ ॥ ದನುಪಮ ಸುಷುಮೆಯನಾಂತು ಮಿನುಗುವ ವನಲತೆಯ ಸುಭಗತಿಯನನುಕರಿಸಿತು ॥। ೪೧ ॥।

ಶಿವಯೋಗಿ ಗುರುವರೇಣ್ಯನಿಗಾಗಿ ವಿಧಿಯಿಟ್ಟ । ಶಿವಜೀ
ಕೀಕತೆಯ ವಿಜ್ಞಾನವೆಂಬುವಮೃ ॥ ತವತುಂಬಿ ಬಾಯಿಗೆ ಮಹಾ
ನೀಲವರಳಿನ ಘನೇತರ ಶರಾವನಿಟ್ಟು ॥ ತವೆ ಭದ್ರತೆಯನಾ
ತ ಕನಕ ಕಲಶಗಳ ಯು । ಗ್ಮವಿದೇನೆನುವತೆರ ಸುದತಿಯ ವಕ್ಷೋ
ಜಂಗ ॥ ಳವು ಸುತ್ತ ಕಪ್ಪಿಡಿದು ತೋರುತಿಹ ಚೂಚುಕಗಳಿಂದ
ಮಾದವು ಗಡ ॥ ೪೨ ॥

ಬೆಳೆಯೆ ಗುರುಜಘನ ಭೂಧರದೊಡನೆ ದಿನದಿನದಿ । ನಳಿನ
ಪ್ರಿಯತಾಂಬಕೆಯು ಪೊಡೆಯಧಿಕ ಮಂ ॥ ಜುಳವಾದ ನಡೆಯೊ
ಡನೆ ಮೃದುಮಧುರವೆನಿಸುವ ನುಡಿಯತಿಮಾಂದ್ಯವನು ಪೊಂದೆ॥
ಅಳಕಾಳಿಯದು ತನ್ನಯೊಡನಾಡಿಗಳ ಚಾಳಿ । ದಳಿದುದೇನೆಂಬಂ
ಕುಚಚೂಚುಕಗಳೊಡನೆ ॥ ಕಾಳಿಮವನೊಳಕೊಂಡಿರೆ ಸುಮಕೋ
ಮಳೆಯು ಬಳಗಕ್ಕದೇನೊಪ್ಪಿದ್ದಳೊ ॥ ೪೩ ॥

✓ ಪತಿಭಕ್ತಿಭಯಯುತ ಸುದತಿಯರೊಳಧಿಕ ವಿಖ್ಯಾತ । ಸತಿಗೆ ಪುಂ
ವನ ಮೊದಲಾದುಕ್ತ ಗರ್ಭ ಸಂ ॥ ಸ್ಕೃತಿಯನ್ನು ಮತ್ತೆಂಟನೆಯ
ತಿಂಗಳೊಳಗೆ ವರವೀರಶೈವರಿಗುಚಿತಹ ॥ ಶ್ರುತಿವಿತತವಾದ ಸಂಸ್ಕೃ
ತ ಸುಲಿಂಗಧೃತಿಯ । ನ್ನತಿಮತಿಯುತ ಪುರೋಹಿತ ವರನಿಂದ
ದರಕೆ ॥ ಹಿತವಧಿಕವಾಗೆ ಮಾಡಿಸಿದನು ಮಹೇಶ ಮುಕುಟಮ
ವಿಭವಕನುಸರಿಸಿ ॥ ೪೪ ॥

ಲೋಕಗುರು ವುದರದೊಳಗಿರೆಯಾತನಾಕಾಂಕ್ಷೆ । ಯಾಕೆಯ
ಸುಚಿತ್ರದೊಳೊಡನೆ ಮೂಡಿತೇನೆನೆ ಕ ॥ ಲಾಕರೆಯೆನಿಪ ಸತೀ
ಮಂತ ಮಣಿಯು ಸಾಕಾಗದಾಕಾಂಕ್ಷೆಯಿಂದ ॥ ಪಾಕಶಾಸನ ವ
ಖಾಮರಲೋಕಪೂಜಿತ ಸಿ । ನಾಕಿಯ ಪವಿತ್ರ ಚರಿತ ಪುರಾಣ
ವ್ಯಗಳ ॥ ನೇಕಚಿತ್ತದಿ ಸಲೆಬಕುತಿಬಾವದಿಂ ಕೇಳಿ ಮೋದವ
ತಾಳುತಿಹಳು ॥ ೪೫ ॥

ಪೋಗೆ ನವಮಾಸ ಗರ್ಭಕೆ ಶಾಲಿವಾಹನದೊ । ಳಾಗ ಪದಿ ನೆಂಟುನೂರಾ ಪನ್ನೆರಡು ವಿಕೃತಿ ॥ ಮಾಘಕೃಷ್ಣದ ಸಪ್ತಮಿ ಕುಜ ವಾರದ ರಾತ್ರಿ ಬಸುರುಬೇನೆ ಯೆನಿತಿರದೆ ।॥ ನಾಗವೇಣಿಯು, ಸುಗ್ಗ ಲೆಯು ಸಿದ್ಧನಂತೆ ಸುಖ । ವಾಗಿ ಹೆತ್ತಳು ಬಾಲ ಶಶಧರನನು ಸುಜನರ ॥ ಭಾಗಧೇಯ ಪಯೋನಿಧಿಯು ಪೆರ್ಚಿ ಮೇರಿವರಿಯೆ ವಿಬುಧಚಕೋರ ತಣಿಯೆ ।॥ ೪೬ ।॥

ಆವನ ಕಡೆಯ ಕಟಾಕ್ಷದ ಭಾವವ ಸಲೆ ಸಂ । ಭಾವನೆಯ ಗೆಯ್ಯದ ಸುರಾಸುರರ ಮಾನವರ ॥ ಜೀವನ ವನಕೆ ದಾವನೆನಿ ಸುವಪ್ರತಿಹತ ಪರಾಕ್ರಮಯುತ ಮದನನು ।॥ ಪಾವಕಾಂಬಕ ದಿಂದುರುಹಿದ ಶಿವದೇವನಾ । ಪಾವನಾರ್ಧತನುವಂ ತಾನಪಹ ರಿಸಿ ಮಹಾ ॥ ದೇವನನ್ನರ್ಧನಾರೀಶನಂ ಮಾಡಿದ ಮಹಾದೇವಿಗೆ ನತನಪ್ಪೆ ।॥ ೪೭ ।॥

ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳು
ಮೊದಲನೆಯ ಸಂಧಿ ಪದಂ ೪೭ ಕ್ಕಂ
ಮಂಗಲಮಸ್ತು.







## — ಎರಡನೆಯ ಸಂಧಿ. —

॥ ವಾರ್ಧಿಕ ಷಟ್ಪದಿ ॥

ಸೂಚನೆ ॥ ಧರ್ಮದುದ್ಧರಣದ ನಿಮಿತ್ತದಿಂದಲುದಿಸಿದ ।
ಕರ್ಮಕ್ಷಯಕರವರ ಸಿದ್ಧಲಿಂಗಗುರು ಸ ॥
ದ್ಧರ್ಮಸಿಂಹಾಸನದೊಳುದಯಾದ್ರಿ ಶೃಂಗದೊಳು
ರವಿಯಂತೆ ರಾಜಿಸಿದನು ॥೦॥

ಮುಗ್ಧೇಂದುಶೇಖರ ಮುನೀಶಹೃದಯನಿಶಾಂತ । ದಿಗ್ಧೀ
ರುಕಾಂತಿಮಣಿದೀಪ ಭೂತೇಶ ಶಿವ ॥ ದುಗ್ಧಾಬ್ಧಿಜಾಪ್ರಿಯ
ಮಾದಿ ದೇವಸಮೂಹ ಮೌಳಿಮಣಿರಂಜಿತಾಂಘ್ರಿ ॥ ದಗ್ಧಾ
ರಾರಿಪ ಪುರತ್ರಯ ಬಕುತಿಯುತ ವಿ । ದಗ್ಧೋತ್ತಮಾಲಿಪರಿಕೀರ್ತಿ
ಶುಭಚರಿತ ॥ ಸ್ನಿಗ್ಧಾದ್ರಿಜಾ ಸಿಂಹಪೀಠೀಕೃತ ನಿಜಾಂಕನೆ ವೃ
ಭಾಂಕನೆ ನೀಂ ಪೊರೆ ॥ ೧ ॥

ಗಂಧತುಂದಿಲವೆನಿಪ ಗಂಧವಾಹವು ತಾನು । ಮಂದಮಾ
ವೆನಿಸುತಲಂದದಿಂದ ಚರಿಸಿದು ॥ ದಂದು ದಿಕ್ಕುಗಳ ನೆರೆ ಬ್ರ
ವತಿನಿರ್ಮಲತೆಯಿಂದ ಪರಿಶೋಭಿಸಿದುದು ॥ ಕಂದಿಕುಂದದ ಹೋ
ಮವಹ್ನಿಯಜ್ವಾಲೆಯದು । ಬಂಧುರತರದಲೆದು ಬಲಕ್ಕೊಲೆ
ರಾಜಿಸಿತು ॥ ಸಂದೆಗವೆ ಸಟೆಯೆ ಸಜ್ಜನರುದಯವು ಭುವನಕೆ
ಹಿತಕೆಂಬುವ ಸೂಕ್ತಿಯು ॥ ೨ ॥

ಹಡೆದ ಮನೆಯಲ್ಲಿರುವ ಹಾಸಿಗೆಯ ತಲದಲ್ಲಿ । ಕಡುಚಲ್ವ
ನಾಗಿ ಮಲಗಿಹ ಬಾಲಕನ ಮುಖದ ॥ ಬಿಡದಲೆಳೆನೇಸರಿನ ಪೊಂಬಿ
ಸಿಲಿನಂತೆಲ್ಲೆಡೆಯೊಳು ಪಸರಿಪ ಕಾಂತಿಯ ।॥ ಬಡತವನು ತಾಳ
ಲಾರದೆಯರ್ಧರಾತ್ರಿಯೊಳು । ಮಡುಗಿರ್ದ ತೈಲಪೂರಿತಗಳಹ
ದೀಪಗಳು ॥ ನಡುವಗಲದುಡುಪನಂತೋಜೋರಹಿತಗಳೆನಿಸೆಂ
ತೋರಿದವೊ ನೆಲದೊಳು ।॥ ೩ ।॥

"ಗುರುವಂಶ ಸಂಭೂತನಾಪುರೋಹಿತ ಬಂದು" । ಗುರುಪಾದ
ತೀರ್ಥಮಂ ತಳೆದು ಭೂತಿಯನಿಟ್ಟು ॥ ಪರಮ ಮನುಪೂತವಹ
ಶಿವಲಿಂಗಮಂ ಕಂಠದೊಳು ಧರಿಸಿ ಜಾತಕರ್ಮ ।॥ ವಿರದೆ ಮಾಡೆ
ತನೂಭವನನುಪಮ ಕಾಂತಿಮಂ । ಜರಿಯುನುರೆಯಾಂತು ಶಾಣೋ
ಲ್ಲೇಖನಾದಿ ಸಂ ॥ ಸ್ಕರಣವನು ತಾಳ್ದಾಕರೋದ್ಭವ ಮಣಿಯ
ವೋಲೆಲೆಂ ಬೆಳಗಿದನೊ ಭುವನದೊಳಗೆ ।॥ ೪ ।॥

ಪರಶಿವನ ಪಾದಕೃಪೆಯಿಂದಲಾತ್ಮಭವನೆನಿ । ಸಿರುವ ಶಿಶು
ವಿನ ವದನಮಂಡಳವನು ನಿವಾತ ॥ ತರ ದೇಶದಲ್ಲಿರುವರಳಿದ ತಾವ
ರೆಯೆಂತೆ ನಿಷ್ಕಂಪ ನೇತ್ರಂಗಳಿಂ ।॥ ಪರತರಾಶಾವಶದಲೀಕ್ಷಿಸುತ್ತ
ಲಿರುತಿಹ । ವರ ಚನ್ನಬಸವನಾನಂದವು ಮನದಿ ಸುಧಾ ॥
ಕರನ ದರ್ಶನದಿಂ ಸುಧಾಂಬುಧಿಯ ಪೂರದಂತಿನಿತಾದರಡಗಲಿಲ್ಲ
॥ ೫ ॥

ಭೃಂಗಕುಂತಲೆಯರು ಸರಿಹರಿಯಮಧ ಸುಭಗೆಯರು । ತುಂಗ
ಕುಚೆಯರನಂಗ ಮಾತಂಗಮದಗತಿಯ । ಶಿಂಗಿತಜ್ಞೆಯರು ಗೃಹ
ಮಂಗಲ ಲಕುಮಿಯರುರು ಬಂಗಾರಬಳ್ಳಿಯರುರೆ ।॥ ಭಂಗಿತಾ
ನಂಗಾಂಗನಾ ಸುಲಾವಣ್ಯೆಯರು । ಕಂಗಳ ಕಡಿಯನೋಟದಿಂ
ಯುವಕುರಂಗಗಳ ॥ ಭಂಗಮಂ ಮಾಳ್ಪ ತರುಣಿಯರು ಕಂದನನು
ಚಿನ್ನದ ತೊಟ್ಟಿಲೊಳು ಮಲಗಿಸಿ ।॥ ೬ ।॥

ಮಂಗಲಾಕರ ಜೊ ಮಹಿತಗುಣಮಣಿಮಂಡನ ಜೊ । ಲಿಂ
ಸಂಗತ ಕಲೇವರ ಜೊ ಯಮಿಪುಂಗವ ಜೊ ॥ ಅಂಗಜನಿಮಾತಂ
ಮದಭಂಗ ಪಂಚಾಸ್ಯ ಕರುಣಾಮೃತಕಟಾಕ್ಷ ಜೊ ॥ ಭಂಗಿ
ಮಹಾಮಾಯಿಕವರಮದ ಜೊ ಮುನಿಪ ಜೊ । ತುಂಗನೃಪರು
ಮಾಂಗಮಣಿರಂಜಿತಪದ ಜೊ ॥ ಭೃಂಗಸಿತಿ ಸಿದ್ಧಲಿಂಗ ಜೊ
ಯೆಂದು ಜೋಗುಳವ ಪಾಡಿದರು ಸುಸ್ವರದಲಿ ॥ ೭ ॥

ಹಾಸಿಗೆಯ ತಲದಿ ಮೇಲ್ಮುಖನಾಗಿ ಮಲಗಿರುವ । ಭೂಸು
ರಾಂಗನಹ ಬಾಲಕನು ಭೂತಲದಿ ಸಲೆ ॥ "ಭೇಶಭೂಷನೊಲವಿ
ಸದ್ಭಕ್ತಿಯೇ ಮೂಲಕಾರಣವೆನಿಸುವದದರಿಂ" ॥ ದೇಶಭಕ್ತಿಯ
ನೆರಡು ಕೈದಾವರೆಗಳಿಂದ । ಬೇಸರಿಸದೀರೀತಿ ಪಿಡಿಯುತಿ
ನೆಂದೆಂಬು ॥ ಪಾಶೆಯನಭಿನಯಿಸುವನೆಂಬಂತೆ ತೊಟ್ಟಿಲೊ
ಕರಮುಷ್ಟಿಯಿಂದೊಪ್ಪಿದ ॥ ೮ ॥

ಕುಂದುಕೊರತೆಗಳಿಂದಲುಚ್ಚನೀಚತೆಯಿಂದ । ಸಂದ ಚಂ
ನಮಾಲೆ ಮೊದಲಾದ ವಿಷಯವಿಷ ॥ ವೃಂದದುಪಭೋಗದಿ
ಧರೆಯೊಳಗೆ ಕಡುಬೆಂದು ಬಳಲುವ ಮನುಜಕೋಟಿಯ ॥ ಮಂ
ತನವನು ಕಂಡು ಗಹಗಹಿಸಿ ತಾನಗುವ । ನೆಂದೆಂಬುವೋಲಕಾ
ಣದಿಂದ ನಗುವ ಬಾ ॥ ಲೆಂದು ಬಾಂಧವರ ನಯನಕುವಲಯ
ಕೆಗೆ ಮೋದವನು ಮಾಡಿದನು ಜಗದಿ ॥ ೯ ॥

ಶಿವಸಮಾಧಿಯನನುಭವಿಪುದರಿಂ ಸಲೆ ಸಮು । ದ್ಭವಿಸಿ
ಮಹಾನಂದವರಸುಧೆಯು ಕೈಸೇರ ॥ ಲವಧಿಯಿಲ್ಲದದನಾಸ್ವಾ
ಪನೊಲು ಕರಂ ಕರವನಾಸ್ಯದಿಡುತೊಪ್ಪಿದ ॥ ತವಕದಿಂದೆ
ತೋಳುಗಳೊಳಡ್ಡೈಸಿ ಮೋ । ಹವತೋರಿ ಮುದ್ದಿಡುವ ಮುಗ
ದೆಯಳ ಮುಂಗೂದ ॥ ಲವ ಪಿಡಿದೆಳೆದು ನಗಿಸಿದನರಿಸಿರಿಯ
ಕಾಳಿ ಪಿಡಿದೆಳೆವವೊಲು ಬಾಲನು ॥ ೧೦ ॥

ಶಾರದ ಶಶಾಂಕನೊಲು ಶುಭ್ರವಹ ಸತ್ವವು ಶ । ರೀರದಲ್ಲಣ ಗದಲೆ ಮುಖದಿ ಹೊರಹೊರಟ ತ ॥ ತ್ಸಾರದ ಮೊಳಕೆಗಳೆಂಬಂತೆ ತೋರಿದವು ಬಾಲನೆಳೆಬಿಳಿಪಲ್ಮೊಸೆಗಳು ।॥ ಸಾರತರ ಲಾಲಾಜಲ ಕಣರಾಜಿ ಸುವಿಶಾ । ಲೋರಃಸ್ಥಲದಿ ಸಂವಿರಾಜಿಸಿತು ಸಮುದಾ ರ ॥ ದಾರದಾಧಾರವಿಲ್ಲದ ಮುತ್ತಿನುತ್ತಮೈಕಾವಳಿಯ ಹಾರ ದಂತೆ ।॥ ೧೧ ।॥

ಈಶಭಕ್ತಿವಿಶೇಷ ವಿಶ್ರುತ ಪರಮಶೈವ । ಪಾಸದೇಶದಿ ಪದ ನ್ಯಾಸವಘವೆಂಬಂತೆ ॥ ಭಾಸುರಾಂಗನು ಭರದಿಯಂಬೆಗಾಲಿಲಿ ನಡೆದು ಜನಕೆ ನೋದವನಿತ್ತನು ।॥ ನೇಸರುದಯಾದ್ರಿಯಾಶ್ರ ಯದಿ ಗಗನವನೇರಿ । ವಾಸರದಿ ಚರಿಪವೋಲೀಕುಮಾರನು ಗೋಡಿ ॥ ಯಾಸರವಿಡಿದು ನಡೆದನಿಹದಿ ಓಽನೋಽಪಾಧಿ ಪರತಂತ್ರತೆಗೆ ಮೂಲವು ।॥ ೧೨ ।॥

ಆಕಾರವಿಲ್ಲದಿಹ ಪರಬೊಮ್ಮ ಭುವನದೊಳ । ಗಾಕಾರವಂ ಧರಿಸಿಯರ್ಭಕನೆನಿಪನೆಂಬ ॥ ವೋಲ್ಯಾಕಪಕ್ಷವಾಂತು ಚರಿಸುವ ಬಾಲನ ಪದನ್ಯಾಸದಿಂದಂಗಣ ।॥ "ರೇಖಾರಥಾಂಗ ಜಲಜಾತಾತ ಪತ್ರಗೃಹ । ಶಂಖಾದಿ ಲಾಂಛನಗಳಿಂ ಸಚಿತ್ರವೆನಿಸಿತು ॥ ಭೂಕಾರಣ ಪುರುಷನ ಲಕ್ಷಣವಿದೆಂದಭಿಜ್ಞರುರೆ ಕೊಂಡಾಡುವಂತೆ" ।॥ ೧೩ ।॥

ಮೃಡನ ಪೂಜಕನಾದ ಚನ್ನಬಸವನು ತನ್ನ । ತೊಡಿಯ ಮೇಲಿರುವ ಮಗುವಿನ ಮುಖವ ಮುದ್ದಿಟ್ಟು ॥ ಬಿಡದೆ ನಡೆನೋಡಿ ಮನದೊಳಗೆ ಹರುಷವತಿರೇಕವೆನಿಸುತಿರೆ ತಿಳಿದನುರೆ ।॥ ಜಡ ಮತಿಗಳಾದಿತರ ಹುಡುಗರಂತಿವನಲ್ಲ । ಸಡಗರದಲೆನ್ನ ಕುಲ ವೊಂದಲ್ಲ ಶಿವನೊಲೆಯೆ ॥ ಕಡುಮುಮತೆಯಿಂದ ವರವೀರಶೈವ ಜಗವುದ್ಧರಿಪ ಮಹಿಮಾಂಕನೆಂದು ।॥ ೧೪ ।॥

ಪರಶಿವನ ಕೃಪೆಯಿಂದಲೈದನೆಯ ಹಾಯನವು । ಸರಿಯಾ
ಬರಲು ಶುಭತರ ಮುಹೂರ್ತದೊಳು ಸಲೆ ॥ ಗಿರಿಜಾ ಗಿರೀಶರನ
ಮತ್ತೆ ಕರಿಮುಖನನು ವಿಧಿಯನನುಸರಿಸಿ ಪೂಜಿಸಿ ।॥ ಗುರುವೊ
ಮಾತೃಕಾಕ್ಷರಗಳ ನಿಜಯುಗಳನು । ಅರಿದವರ ಬಲದಿ ಶಬ್ದಾ
ಯಂ ಬಾಲಕನು ॥ ವರಸರಿನ್ಮುಖದಿಂ ಮಕರದಂತೆ ಸಾಗರವ ಸೇ
ರಮಿಸಿದನು ಜಗದಿ ।॥ ೧೫ ॥।

"ಸಂದಿರುವ ಗರ್ಭದೆಂಟನೆಯ ವರ್ಷದೊಳು ಗುಣ । ಸಿಂಧು
ವೆನಿಸುವ ಗುರುವಿನಿಂದಾದ ಶುಭದೀಕ್ಷೆ" ॥ ಯಿಂದರ್ಭಕನು ಮಧ್ಯ
ರಾತ್ರಿದೀಪದೊಲು ತೇಜೋಮಯನೆನಿಸಿದನವನು ।॥ ಬಂಧು
ಬ್ರಹ್ಮಚರ್ಯದೊಳಿದ್ದು ತಾ ಗುರುವಿ । ನಿಂದ ಬಂದ ನಿಗಮಾ
ಮವನರಿದನು ಮರೆದ ॥ ನಂದದಿ, "ಸುಪಾತ್ರದಿಟ್ಟಿಹ ವಿದ್ಯೆ ಶುಕ್ತಿ
ಪತಿತ ಜಲಕಣದೊಲು ಫಲಿಪುದು" ।॥ ೧೬ ॥।

ಈಶಪದಪಂಕೇಜದನುಷಂಗವನ್ನು ತಾ । ಲೇಸಿನಿಂ ಮ
ದೊಡನೆ ಮಾಡಲದರ ಸುಖಪೀ ॥ ಯೂಷವನು ಸವಿಸವಿದು ಯೆ
ಕಾಂತವಾಸದೊಳು ಚಿರಮಿರುತಿರುವನಘನನು ।॥ ಭಾಸುರಾಂಗ
ನೀಕ್ಷಿಸ ಜನವೀತೇಜೋವಿ । ಶೇಷವು ಭುವನದ ಭಾವಿಸುಖ ಕಾ
ರವೆನಿಸು ॥ ತೋಸರಿಸದದನುದ್ಧರಿಸುವದೆಂದು ನುಡಿನುಡಿದ
ಮನದೊಳು ಮೋದಿಸುವದು ।॥ ೧೭ ॥।

ನೊಸಲೊಳಗೆ ಭಸಿತವಿರುವವನಸಮನಯನಸಮ । ಮಿಸು
ಪಂಚಾಕ್ಷರವನನವರತ ನುಡಿವ ನರ ॥ ನಸಮಶರಕುಧರ ಕುಲಿಶ
ಲಿಂಗಧಾರಕನು ತನ್ನಯಧಿದೇವತೆಯನು ।॥ ತುಸುರುತಿಹ ಭಾ
ನಾಧಿಕಪೂತಚಿತ್ತ ನಾ । ದಸಮಾನ ತೇಜೋಭರಿತ ಶಾಂತಮೂ
ಯಹ ॥ ಜಸವಾಂತ ಗುರುವು ಜಗದತಿಬೇಸರ ಕಳೆವಾಕಾರದಿ
ಚರಿಸುವನು ।॥ ೧೮ ॥।

"ಸದ್ಧರ್ಮ ಸಿಂಹಾಸನಾಧಿಪತಿಯಾಗಿ ಜನ । ದುದ್ಧರಣವೆ ನಿಜಹೃದ್ಧರ್ಮವಾಗಿಹ ಮರುಳ ॥ ಸಿದ್ಧನು ಶಿವಾಚಾರ್ಯ ಸಂಚಾರಕೊಂದುದಿವಸ ಬರಲವನಮ್ರನಾಗಿ ।॥ ಬದ್ಧಕರ ಚನ್ನಬಸವಾರ್ಯನಿಂದಂ ಚಿನ್ನ । ಸಿದ್ಧಲಿಂಗನನು ಸುರರಾಜನಿಂ ಕಲಭನೊಲು ॥ ಶುದ್ಧಭಾವದೊಡನಂಗೀಕರಿಸಿ ತನ್ನೊಡನೆ ಕರೆತಂದು ಪೋಷಿಸಿದನು ।॥ ೧೯ ।॥"

ಮಲೆಯಾದ್ರಿಯ ಯೆಳೆಗಾಳಿಯು ದಿಗ್ವಲಯದಿ ತಾ । ನಲಿದಾಡಿ ಸಂಪಿಗೆಯ ಸೌರಭದ ಸಂಪದವ ॥ ಸಲೆ ಪಸರಿಸುತಿರೆ ಕೇಸರ ಕುಸುಮಗಳ ಕೇಸರಗಳ ಭಾಸುರಧೂಳಿಯಿಂ ।॥ ಕಲಿತವಾಗಿರೆ ನಭೋಮಂಡಲವು ದಿಗ್ವಧೂ । ಸುಲಲಿತ ಲಲಾಟದೊಳು ತಿಲಕದಂತಿರೆ ತಿಲಕ ॥ ಕಲಿಕವಾಗದು ಬಂದುದಾನಂದವೀಯುವ ವಸಂತ ಸಮಯವು ಜಗದೊಳು ।॥ ೨೦ ।॥

ಸುಂದರಗಳಾದ ವಲ್ಲಿಗೆಯ ಮೊಗ್ಗೆಗಳಿಂದ । ಬಂಧುಜೀವಕ ಸವರ್ಣಗಳಾದ ಪಲ್ಲವಗ ॥ ಳಿಂದಲಾವಮಾಕಂದಮರಗಳುರು ಸಾಲುಗಳರಣ್ಯಾಂಕ ಧರಣಿಯೊಳಗೆ ।॥ ಕಂದರ್ಪನತುಲದರ್ಪದಲಿ ತಾ ಜಯಯಾತ್ರೆ । ಗಂದು ಬರ್ಪನೆನುತ ಮಧುವು ಮಾಳ್ಪ ವೆನೌಕ್ತಿಕಗ ॥ ಳಿಂದಂದವಾದ ಶೋಣಮಣಿಗಳ ಗೂಡಾರಗಳಿವೆಂಬುವಂತೆಸೆದವು ।॥ ೨೧ ।॥

ಅಳಿಗಳ ಬಳಗಗಳುರೆ ಬನದೊಳಗೆಳೆ ಯೆಲರಿಂ । ದೊಲೆವ ಕುರುವಕ ಕುಸುಮಗಳ ಸುಧೆಯ ಸವಿಯನ್ನು । ಪಳಿವ ಮಕರಂದರಸ ಮನವಾರೆಯುಂಟ ಯನಿವಾರ್ಯ ಮದವನ್ನಾಂತವು ।॥ ತಿಳಿಗೊಳದೊಳಗೆ ಮಿಂದು ಕುಸುಮರೇಣು ಭಸಿತವ । ದಳೆದಾಗದಿ ಬಳಿಕ ಮಧುವ್ರತ ಶಿವಾಕ್ಷಾಂಗ ॥ ಳೆಳೆಗಳನು ಧರಿಸಿ ಯತಿಯಂತೆ ಸುಳಿದುದು ಸೌರಭದ ಭಿಕ್ಷೆಗೆಲಸು ಬನದಿ ।॥ ೨೨ ।॥

ತಿಂದುಸಲೆ ಮಾಕಂದ ಮರಗಳೆಳೆ ದಳಿರುಗಳ । ನಂದುವ
ದಿಂದಂಥ ಪರಪುಟ್ಟವಕ್ಕಿಗಳ ॥ ಬಂಧುರನೆನಿಪ ಸವಿಸರವು ಭುವ
ದೊಳು ವೀರಕಂದರ್ಪ ಭೂರಮಣನು ।॥ ಬಂದನೆಂಬುದನು ಸೂಚಿ
ಕಾಹಳಾನಾದ । ದಂದಮಂ ತಾವಹಿಸಿ ಪಥಿಕಯುವಕರಚಿತ್ತ ।
ವೊಂದಿದಾನಂದವನು ಗೆಡಿಸಿಯುವರ ಧೃತಿಕವಚವ ಜವದಿ ಭೇದಿ
ತಹೊ ।॥ ೨೩ ।॥

ಅಂತೆಸೆವ ವಾಸಂತಕಾಲದೊಳಗೊಂದು ದಿನ । ಕಂತುಹ
ಶಿವನ ಪೂಜಾನಂತರದೊಳು ಗುರು ॥ ವಂತರಂಗದಿ ಚಿಂತಿಸಿದ
ನಂತಿರುವ ಶಿಷ್ಯರ ಪಾಲನದುರುಭಾರ ।॥ ವಂ ತನೆಪೊರುವನಾವ
ಬುದ್ಧಿವಂತನೊಳು । ಸಂತಸದಿರಿಸಿ ತಲೆಯ ಭಾರವನಿಳುಹಿದ ನರ
ನಂತೆ ಕಳೆದಾಯಾಸವನುಳಿದ ಸಮಯದೊಳಾತ್ಮವಿಚಾರದೊಳ
ನೆಂದು ।॥ ೨೪ ।॥

ಚನ್ನಬಸವಾರ್ಯನಾತ್ಮಜನು ಸ್ವಭಾವದಿಂ । ಮನ್ನಣೆಯ
ಸೌಜನ್ಯಮಂಡಿತನು ಧೌರೇಯ ॥ ನನ್ಯಸಾಧಾರಣಗಳಾಗ
ಗುಣಮಣಿ ಸಂಪನ್ನನಾಗಿಹುದರಿಂದ ।॥ ಸನ್ನುತ ಸುಸದ್ಧ
ಸಿಂಹಪೀಠದ ರಮೆಯ । ಮಾನ್ಯ ಪತಿಯೆನಿಪನೆಂಬುದ ನಿಶ್ಚಯ
ಮಣಿಯಂ ॥ ತನ್ನ ಹೃತ್ಪೇಟಿಕಾ ಪುಟದಿಟ್ಟು ನಿಶ್ಚಿಂತನಿರ್ದನ
ಮರುಳಾರ್ಯನು ।॥ ೨೫ ॥

ಚಿರವಿಕಸಿತ ಸರಸಿಜಮಂ ತೊರೆದರೆ ಬಿರಿದಿಹ । ಕರಿದಾವ
ಯನು ಗುಣದುತ್ಕರ್ಷದಿಂ ಸರೋ ॥ ವರದ ಸಿರಿಯಿರಲು ಬಯ
ಸುವ ತೆರದಿ, ಗುರುಪೀಠದ, ಮಠಸಾಮ್ರಾಜ್ಯವನ್ನು ।॥ ಚಿರಕಾ
ದಿಂದ ಧರಿಸಿದ ಮರುಲದೇವನಂ । ಮರೆ ದೆಳೆಹರೆಯದ ಗುರುಸಿ
ಲಿಂಗವರನಂ ॥ ಸರಿವರನಿವನೆನುತಿಚ್ಛಿಸಿದಳಿಹದಿ ಚಪಲೆಯರೊ
ವು ಹರೆಯನೊಳಲ್ಲವೆ ।॥ ೨೬ ।॥

ಎಂದಿನಂತೊಂದುದಿನ ಬಂದು ಪಾದಾಂಬುಜ । ದ್ವಂದ್ವವನು ಸಾಷ್ಟಾಂಗದಿಂದಭಿನಮಿಸಿ ವಿನಯ ॥ ದಿಂದಾಸನದೊಳುಚಿತಮನೆ ಕುಳಿತಿಹ ವಿಶಾಲಭಾಲದಿ ಸಿತಭಸಿತವನಾ ।॥ ನಂದದಿಂದ ಧರಿಸಿರುವ ಶಿವಾಕ್ಷಮಣಿಗಳ ಸು । ವೃಂದದಿಂ ಸುಂದರತರ ಶರೀರನಾದ ಬಾ ॥ ಲೇಂದುವಂ ನಡೆನೋಡಿ ಮನದಿ ಸಂತೋಷಮುಂತಾಳಿ ಗುರುವರನುಸುರಿದ ।॥ ೧೭ ।॥

ತಾತ ನೀನಾಲಿಸುವದಾಲಸ್ಯವಿಲ್ಲದಲೆ । ಪೂತತರವಾದ ವೇದತದಂತಮುಖ್ಯ ವಿ ॥ ಖ್ಯಾತ ವಿದ್ಯಾಭ್ಯಾಸ ಬಲದಿಂದ ನೈಸರ್ಗಿಕದೊಲವಿಂದಲು ಬುದ್ಧಿಯು ।॥ ಸಾತಿಶಯವಾಗಿ ಬೆಳಗುವದೊಳಗೆಯಾದರೂ । "ನೀತಿವಿದ್ವರನೆ ಲೋಕದೊಳು ಖಣಿಜಾತಮಣಿ ॥ ಯಾತೆರದ ಸಂಸ್ಕಾರವನಪೇಕ್ಷಿಸಂತೆ ನೀನಾದರುಪದೇಶಾರ್ಹನು" ।॥ ೧೮ ।॥

ಜಗದೊಳಗೆ ಜನಕೆ ಕಣ್ಣಿದ್ದರೇನದರ, ಫಲ । ವಗದಿಯೊದಗಿಸದಿರುವ ತಾರುಣ್ಯಜನ್ಯತಮ ॥ ದುಗಮವದು ಭಾನುಕೋಟಿಗಳಕಿಸಲಸದಳವಿರುವದದಂತಹುದು ಮಗುವೆ ।॥ ನಗಧರನ ಸತಿಯ ಸಂಪರ್ಕದಿಂದ ಬಿಗಿಯೂ । ಗೊಗೆದ ಮದಮದಿರಪಾನದ ವಿಕಾರವುರೆ ಬಿಡ ॥ ದಗಲು ರಾತ್ರಿಯೆನದಾವರಿಸಿಗೊಂಡವನ ನಗೆಗೀಡು ಮಾಡುವದು ಜನದಿ ।॥ ೧೯ ।॥

ಉರ್ವಿಯೊಳಗೈಶ್ವರ್ಯದಿಂದಲುದಯಿಸುವಂತ । ಗರ್ವವೆಂಬುವ ಪರ್ವತವನು ಭೇದಿಸಲುರೆ ಸು ॥ ಪರ್ವಾಧಿಪತಿಯು ವಿಖ್ಯಾತವಾದ ಪವಿಗಳವಲ್ಲದದು ಕಠಿಣವಷ್ಟು ।॥ ಪೂರ್ವದೊಳಪತ್ಥ್ಯವತಿಹಿತವೆನಿಸಿ ಕಡೆಗೆಯದ । ಖರ್ವಾಹಿತವೆನಿಸಿ ಕೆಡಿಸುವಂತೆ ವನಿತಾದ್ಯ ॥ ಪೂರ್ವ ವಿಷಯವಿಹುದೆಂದರಿದನುಭವಿಸಿ ಕೆಡುತಿಹರು ಮೂರ್ಖರಹಹ ಜಗದಿ" ।॥ ೨೦ ।॥

ಪ್ರೇಮವೆಂಬುವ ಮಲವು ಮಾನವನೊಳಗೆ ಹೊರಗೆ । ಕಾ
ದಿಂ ಲೇಪಿಸಿರುವದದನು ಕಳೆಯಲು ಸಲೆ ॥ ಕಾಮಿಸಿ ಜಲದ ಥ
ಯಿಂದಲೇಸುದಿನವೆಡೆಬಿಡದೆ ತೊಳೆದರು ಪೋಗದು ।॥ ಭೂಮಿ
ಳಗಧಿಕಾರ ಸುಖದುರುಸ್ವಾದವೆಂ । ಬಾಮಹಾನಿದ್ರೆಯೊಳು ಕ
ಚ್ಚಿಹರು ಸದಾ । ಸೋಮವದನನೆ ಕೆಲವರೆಚ್ಚತ್ತರೇನು ತೊಕಳಿ
ಆಕಳಿಸುತಿಹರು ।॥ ೩೧ ।॥

ನೂತನವು ತರುಣತನವದಾಗರ್ಭಸಂಪತ್ತಿ । ಸಾತಿಶಯಲಾ
ಣ್ಯ, ವಪ್ರತಿಮ ಸಾಮರ್ಥ್ಯ ॥ ವೀತೆರಗಳಾದನರ್ಥಗಳ ಗು
ನೊಳಗೊಂದೊಂದು ನೆಲಧೊಳಗೆ ಬಲುದುಃ ।॥ ಖಾತಿರೇಕವ
ಡುವದವುಗಳೇಕತ್ರ ಸಮ । ವೇತವಾದಡೆ ತತ್ಪರಿಣತೆಯೇನ
ನೈ ॥ ಪೀತವು ಪಿಶಾಚಮತ್ತವು ವೃಶ್ಚಿಕವರದಿಂ ದಷ್ಟವಾದ
ಯಂತೆ ।॥ ೩೨ ।॥

ತಾರುಣ್ಯದಾದಿಯೊಳು ಮಾನವನ ಬುದ್ಧಿಯದು । ದಾ
ಗಿದ್ದು ನೀತ್ಯಾದಿ ಶಾಸ್ತ್ರಗಳ ಸಂ ॥ ಸ್ಕಾರದಿಂ ಶುದ್ಧವಿದ್ದ
ಕಾರುಗಾಲದ ಜಲದೊಲು ಮಲಿನವೆನಿಸುವದು ।॥ ಧೀರನೆ ಪ್ರ
ತಿಯದಸಾರ ಸಂಸ್ಕೃತಿಯೆಂಬ । ಘೋರತರವಾದ ಕಾನನದ ಕ
ಕದ ಬಲು ॥ ದೂರದೇಶದೊಳೊಯ್ದು ಚಲ್ಲುವದು ಪುರುಷನಂ ಬಿ
ಗಾಳಿಯರಳಿಯಂತೆ ।॥ ೩೩ ।॥

ಹರಿಯದ ಗುರುತರ ಮದದಿರುವ ನರನೇಂದ್ರಿಯ ಕು । ಕ
ಣಗಳು ಮದನನೆಂಬ ಮಧುಮಾಸದ ಬಿಸಲಿ ॥ ಗಿರದೆ ತಪಿಸಿ
ಯಾನುಭವವೆಂಬುವ ಮೃಗಜಲದ ಕಡಿಗವೋಡುವವಲ ।॥
ತರದ ವಿಷಯದಾಸೆಯೆನಿಪುರುತರ ನಿಶಾ । ಚರಿಯು ಮನ
ಮೋಹನನವ ಮಾಡುತೆ ಬಲಾ ॥ ತ್ಕರಿಸಿ ಜೀವನ ರಕ್ತವನು
ಯವನಂ ಕೆಳಗೆ ಕೆಡಹುವಳು ಬಿಡದಲೆ ।॥ ೩೪ ।॥

ಪಾಲ್ಗೊಂಡಿರೆಯರಸನಲ್ಲಿ ತಾನುದಯವಾಗುವಾ । ಕಾಲದೊಳು ಪಾರಿಜಾತ ದಲದಿಂ ರಾಗಮಂ ।॥ ಕಾಲಕೂಟವಿಷದಿಂ ಮೋಹವಂ ಕೌಸ್ತುಭಾಖ್ಯಮಣಿಯಿಂ ಕಾಠಿಣ್ಯವ ।॥ ಬಾಲಶೀತಮಯೂಖನಿಂ ಕುಟಿಲತನವ ಸುರ । ಪಾಲನ ಕುದುರೆಯಿಂ ಚಪಲತನವ ಮದ ಕರಣ ॥ ಶೀಲವಂ ಮದಿರೆಯಿಂ ಗ್ರಹಿಸಿದಳೊಯೇನೆಂಬುವಂತೆ ತೋರುವಳು ಲಕುಮಿ ।॥ ೩೫ ।॥

ಪುರುಷರಲ್ಲಿವನುತ್ತಮನೆನುವರ್ಥದಿ ಸುರಾ । ಸುರನರರೊಳು ಖ್ಯಾತವಾಗಿರುತಿರುವ ಪರಮ ॥ ಪುರುಷೋತ್ತಮನೆನಿಸುವ ನಾಮ ಮಂ ಚಂದ್ರನಂತನ್ವರ್ಥದಿಂದ ಧರಿಸಿ ।॥ ಪರಮಾನುರಾಗದಿಂ ತನ್ನನುರದೊಳಗಿಟ್ಟು । ಪರಿ ಮೋಹಿಸುತೆ ಮುದ್ದಿಡುವ ಕೇಶವ ಪತಿಯನು ॥ ಜರಿದಿತರನಂ ವರಿಸಲಿಚ್ಛಿಪತಿಚಪಲೆಯಂ ಲಕುಮಿ ಯಂ ನಂಬಲಹುದೆ ।॥ ೩೬ ।॥

ಸೌಜನ್ಯವೆಂದೆಂಬ ಗಂಧಾದಿ ಲೇಪನವು । ಸೋಜಿಗವು ಪಟ್ಟಾಭಿಷೇಕಾಂಬುಧಾರೆಯಿಂ ॥ ಮಾಜದೆ ತೊಳೆದು ಪೋಗುವದ ಋವಾದರುಳಿಯದೊಲವನೊಳಂತೇವಾಸಿಯೆ ।॥ ಸ್ವೈಜದಿಂದಾಗಾ ಗುವ ವಿಧಿವದ್ಧೋಮದಿಂ । ಸಂಜನಿತ ಧೂಮದಿಂದೆಂಬಂತೆ ನಿರ್ಮಲಾ ॥ ದೋಜದಿಂ ರಾಜಿಸುವ ಪಟ್ಟಾಭಿಷಿಕ್ತನ ಮನವದು ಮಲಿನವೆನಿಸುವದು ।॥ ೩೭ ।॥

ವರಪುರೋಹಿತನ ಕರದಿರುವ ಕುಶಕೂರ್ಚಜಲ। ದುರುಸೇಚ ನೆಯದಾಗಲಧಿಕಾರಿಯ ಶರೀರ ॥ ದಿರುವಕ್ಷಮಾಧರ್ಮ ಲೇಶವಾದ ರುಳಿಯದೊಲದು ನಾಶವಾಗುವದಲ ।॥ ಶಿರದಲ್ಲಿ ಸೌವರ್ಣಪಟ್ಟ ಕಾಬಂಧವನು । ಗುರುವಿನಿಂದಾದುದನರಿದಧಿಕಾರಿಯು ಮುಂದೆ ॥ ಜರೆಯಿಂದಲೊದಗುತಿಹ ನೆರೆಗೂದಲಗಳ ಸ್ಮರಣೆಯನ್ನು ಮಾಡನಿ ಹದಿ ।॥ ೩೮ ।॥

ಹೇಮದಂಡದಿನಲಂಕರಿಸಿರುವ ಶಶಿಧವಲ । ಧಾಮಾತಪತ್ರ
ವ ಶಿರದೊಳನುಚರನು ಪಿಡಿಯೆ ॥ ಕೋಮಲನೆ ಯದರಿಂದಲ್ಲ
ಕಾರಿಗೆ ಪರಲೋಕವು ಮರೆಯೆನಿಪುದು ಜಗದಿ ।॥ ಚಾಮರಯು
ಳದ ವಾಯುವಿನಿಂದೊಡೆಯನ ನಿ । ಶ್ಯೇಮ ಸತ್ಯಾಚಾರ ಶೀಲ
ಭರದಲಿರದ ॥ ಲಾಮಹಾವಾತದಿಂದೊಣಗಿದೆಲೆ ತುಣಕಿನೊ
ಹಾರಿಹೋಗುವದು ಮಗುವೆ ।॥ ೩೯ ।॥

ಜಗದೊಳಗೆ ಜನ್ಮಜನ್ಮಾಂತರದೊಳಗನುದಿನ । ಪೊಗ
ಸುಕೃತವಿಶೇಷಮುಳ್ಳ ನಿನ್ನಂತಘನ ॥ ಸುಗುಣಮಣಿ ಸಂಪನ್ನ
ತಮ ಶಿಷ್ಯನ ಹೃದಯಕಮಲದೊಳುಪದೇಶವದೆಲೆ ।॥ ನಗಿವೊ
ನೆ ಫಲಿಸುವಂತಿತರ ಮೂರ್ಖಜನ ಮೂ । ರ್ಧಗನೊಳು ಫಲಿಸು
ದೇನೋ ಮೃಗರಥನೊಳಗಿಹ ॥ ಚಿಗರೆಯು ಪಡಿನೆಳಲು ಜಗಜ
ಸುವ ಕೈಪಿಡಿಯೊಳಂತೆ ಮಣ್ಣೊಳು ಪೊಳೆವುದೆ ।॥ ४೦ ।॥

ಬೇಸಿಗೆಯ ನಡುವಗಲು ಭಾಸಮಾನವೆನಿಸಿರು । ವಾಸಹಸ್ರ
ಕರನ ಬಿಸಿಲು ಭುವನದೊಳು ತಮೋ ॥ ರಾಶಿಯಂತೆ ಪರತರ ದೇ
ಕನ ಸದುಪದೇಶವು ದೋಷವನು ಕೆಡಿಪುದು ।॥ ಲೇಶನಿಸಿ ತೋ
ತಿಹವನಿತಾದಿ ವಿಷಯಗಳ । ವಾಸನೆಯನರಿಯದ ನರನೊಳು ನಿ
ವಂತಃರುಪ । ದೇಶವುಪಭುಕ್ತನೊಳು ನಿಲ್ಲದು, ಸುಷಿರಗಳಿರುತಿಪ
ಘಟದೊಳುದಕದಂತೆ ।॥ ४೧ ।॥

ಮುತ್ತುಮಾಣಿಕಗಳಿಂ ಕೆತ್ತಿಮಾಡಿದ ಹೇಮ । ದುತ್ತಮಾ
ಭರಣವಾದ, ವಿರೂಪತೆಯಿರದಿಹ ॥ ಮತ್ತೆ ನೆರೆಗೂದಲಗಳ ಚೆಯ
ದಿಂ ತಲೆಬಿಳುಪನೆತ್ತಿ ತೋರದ, ಕದಪಿನೊ ।॥ ಳೊತ್ತಿದ್ದ ಮಡಿ
ಯಿಲ್ಲದಿರುತಿಹ, ಕುದುರೆಯೂ । ನೆತ್ತು ಮೊದಲಾದ ವಾಹನದಪೇ
ಕ್ಷೆಯಿರದಿಹ ॥ "ಸತ್ವಯುತ ಮುಪ್ಪಾಗಿ ಶೋಭಿಸುವದಾ ಗುರು
ನುಪದೇಶವದು ಜಗದೊಳು" ।॥ ४೨ ।॥

ಸ್ಥಿರವುದಾರವಲೋಕ ಸಾಮಾನ್ಯವನುಪಮ ಮ । ಧುರ ಗುಣೋತ್ಕರವಿರುಪದವರಿಂದ ನಿನ್ನ ಗುಣಿ ॥ ವರನೆ ಬಾಧಿಸದು ಕಾಮಾದಿವರ್ಗವು ಗಿರಿವರನನು ಬಿರುಗಾಳಿಯಂತೆ ।॥ ಅರಿದವರ ದುಃಸ್ವಭಾವವನಡನನು ಮನದಿಂ । ಜರಿದು ದೂರದೊಳಿದ್ದು ಸತ್ಕಾ ಮುಮುಖ್ಯವಂ ॥ ಪೊರೆದು ಮರೆಯದೆ ಜಗದುಪಕೃತಿಯನೆಸಗಿ ಯಶೋಭೂಷಿತನೆನಿಸುತೆ ಬಾಳು ।॥ ೪೩ ।॥

ವೇದವೇದಾಂಗಾದಿ ವಿದ್ಯಾಕರೋದ್ಭೂತ । ಪಾದ ವಿಜ್ಞಾನ ಮಣಿಯು ವಟುವಿನ ಹೃದಯದೊಳು ॥ ಸಾದರ ಸದುಪದೇಶವೆಂಬ ಸಂಸ್ಕಾರದಿಂ ತೇಜೋಮಯವೆನಿಸಿಹುದು ।॥ ಬಾಧ್ಯಬಾಧಕಗಳಾ ಗದಿಹ ವಿನಯ ಸುಶೀಲ । ತಾದಿ ಗುಣಗಣಗಳಾಧಾರನಾಗಿರುತಿರು ವ ॥ ಸಾಧುಶೇಖರ ಸಿದ್ಧಲಿಂಗ ಭವಭಂಗ ಮುನಿಪುಂಗವನು ಶೋ ಭಿಸಿದನು ।॥ ೪೪ ।॥

ಧೀರಮೂರ್ಧನ್ಯನ ಸುಬುದ್ಧಿಯು ಎದೆಯೊಲು ಸಮು । ದಾರ ವೈಪುಲ್ಯವನು ಪೊಂದಿತ್ತೈ ನಯನಗಳು ॥ ಸಾರಸದಲದೊಲಾ ಯತಗಳಾದರವು ಶಾಸ್ತ್ರದೃಗಪೇಕ್ಷೆಯುಳ್ಳವುಗಳು ।॥ ನೀರಜಾಕ್ಷನ ನಾಶಿಕಾಪುಟವು ಸರಲಾಗಿ । ತೋರಿದರು ಮರೆದಾದರೊಮ್ಮೆ ಭವಹರ ಶಿವಗೆ ॥ ತೋರಿಸದ ಕುಸುಮಾದಿ ಗಂಧವದ್ದ್ರವ್ಯವಾಘ್ರಾಣಿಸಲು ವಕ್ರವಿಹುದು ।॥ ೪೫ ।॥

ಬಂಧುರವೆನಿಸುವ ಸದ್ಬ್ರಹ್ಮಚರ್ಯದ ಬಲವ । ಪೊಂದಿ ರಾರಾಜಿಸುತಿಹ ತಪೋಧನಪನ ರಸ ॥ ನೇಂದ್ರಿಯವನೇಕರಸಗಳ ರುಚಿಯನರಿದರ ಶಿವಾರ್ಪಿತವನಿಚ್ಛಿಸದದು ।॥ ಕುಂದಿಲ್ಲದಿಹ ನಯ ನನೀರಜಗಳು ಭುವನದೊ । ಳಿಂದುಶೇಖರ ಸದಾಶಿವನಲ್ಲದನ್ಯಾಮ ॥ ರೇಂದ್ರಾದಿ ದೇವರ ನೀರೀಕ್ಷಿಸುವಪೇಕ್ಷೆಯನು ಮಾಡದಾದವು ಮರೆ ಹೊ ।॥ ೪೬ ।॥

ಜಾಣನಹ ಜಿಷ್ಣುಗುಣಭರಿತ ವಟುಶೇಖರನ । ವಾಣಿಯ
ಸುಪಾಣಿನಿಯ ಶಾಸ್ತ್ರಾಧ್ಯಯನದಿಂದ ॥ ಮಾಣದೆ ಶೃತಿಗೆಯ
ವೀಣೆಯ ಸರಸರಾಗದಂತೆ ಶೃತಿಸುಖಕರವು ।॥ ಕೇಣವಿಲ್ಲದ ರು
ವಂತನ ಶಿಶುತನವನು । ಕಾಣದಂದದಿ ನೂಕಿನೊತ್ತ್ನ ತರುಣತನವು
ಕ್ಷೋಣಿಯೊಳು ಮಾಗೆಯಂ ದೂಡಿ ಬನವಬಸಂತನೋಲಂಗ ಭೂ
ಸಿತಹೊ ।॥ ೪೭ ।॥

ಬಿಸರುಹದಲಾಯತಾಂಬಕನಾಗಿರುವ ವಟುವು । ಹ
ಹರಿಯುದ ಸಿರಿಯಿಂದ ಪ್ರಪುಷ್ಟಾವಯುವ ॥ ವಿಸರದಿಂ ಸುಮ
ಳಿಂ ಕಿಸಲಯುಗಳಿಂ ಸುರತರುವೊಲು ಶೋಭಿಸಿದನು ಗಡ ।॥
ಯೊಳು ಚಿರವಿರುತಿಹ ಶಿಷ್ಯಜನಪಾಲನದ । ಪೊಸಭಾರವ ಪೊ
ರ್ಹನು ಮಹೋಕ್ಷದೊಲೆಂದು ॥ ಬಸಿರದೊಳಿರಿಸದಲೋರ್ವ ಗು
ವತ್ಪುರುಷನೊಳುಸುರಿದನು ಗುರುವಿದನಂದು ।॥ ೪೮ ।॥

ಕಾಲುವೆಯು ಜಲವು ಕೈದೋಟದೊಳಗಿರುವ ತರು । ಜಾ
ಲವಾಲಕೆ ಸಪದಿ ಮುಟ್ಟುವಂತುರುದ ॥ ಯಾಲುವಿನ ಸುಮಹೋ
ತ್ಸವದ ಸುದ್ದಿಯೂರಲ್ಲಿ ಹರಡಿತೆಲ್ಲೆಡೆಯೊಳು ಕಣ ।॥ ಶೀಲ
ಸುಭಗನಾಗಿಹ ಗುರುವರನು ಬೇಗ । ನೀಲಗಲ ಭಕ್ತಸತ್ತಮರ
ಕರೆತರಿಸಿ ॥ ಆಲಿಸಿರಿ ಯೆನ್ನಯಧಿಕಾರಮಂ ಬಾಲನಲ್ಲಿಟ್ಟು ವಿ
ಮಿಸುವೆನು ನಾ ।॥ ೪೯ ।॥

ಎಂದುದಂ ಸಲೆಕೇಳಿ ಗುರುವರನ ಪಾದಾರ । ವಿಂದಗಳಿಗೆ
ಕರಮುಗಿದು ಭೋವಂದಾರು ॥ ವೃಂದಮಂಡಾರನೆ ಕಳೆದು ತನ
ರಾಶಿಯಂ ಕ್ರಮದಿಂದ ಜಗವ ಬೆಳಗು ।॥ ವಿಂದು ರವಿಗಳೊ
ಶಿಷ್ಯಸಮೂಹವನು ಜಗದಿ । ಚಂದದಿಂ ಪರಿಪಾಲಿಸಲು ನಿಮ್ಮ
ಬಳಿಕೆಳೆ ॥ ಚಂದಿರನು ಗುರುಸಿದ್ಧಲಿಂಗನುರು ಬಲವಂತನೆಂ
ಮ್ಮನದಿ ಪೇಳ್ವರು ।॥ ೫೦ ।॥

ಸಾರಸಾಕ್ಷಿಯರು ತಮತಮ್ಮ ಯೋಣಿಯ ಗೃಹ । ದ್ವಾರಗಳ
ಭಾಗದೊಳು ಮೋದದಿಂ ಮಾಡಿರುವ ॥ ಸಾರಸಾರಣೆಯಿಂದ
ಲಂದವಾದ ಪಲಬಣ್ಣದ ರಂಗವಲ್ಲಿಯಿಂದ ।॥ ಲೇರಿಸಿ ನಿಲಯಗಳ
ಶಿರಗಳಲೂರಲು ತೋರ್ವ । ಮಾರರಿಪು ಪಂಚವರ್ಣಗಳ ಕೇತುಗ
ಳಿಂದ ॥ ತೋರಣಗಳ ಶ್ರೇಣಿಯಿಂದ ಪುರಿ ಸುರಪುರಿಯ ಸಿರಿಕೇರಿ
ಯಂತೆಸೆದುದು ।॥ ೫೧ ।॥

ಸಾಗರವ ಸೇರುತಿಹ ನಾಕನಿಮ್ನಗೆಯು ಮೊದ । ಲಾಗಿರುವ
ತಟನಿಗಳ ಮಣಿಕರ್ಣಿಕಾದಿ ತೀ ॥ ರ್ಥಂಗಳುದಕಗಳಿಂದ ತುಂಬಿ
ಮಾಹೇಶಮಣಿಗಳು ತಂದ ಕೊಡಗಳಿಂದ ।॥ ಬೇಗದಿಂದಾಗಮಿಕ
ರೆನಿಪ ವೈದಿಕರವರು । ಪೋಗಿ ಕಾನನದಿಂದ ತಂದೌಷಧೆಗಳಿಂದ
ಲಾಗ ॥ ದರ್ಭಾದಿ ಹೋಮೀಯ ಸಮಿಧಗಳಿಂದಲಂದವಾದುದು
ಮಂಟಪ ।॥ ೫೨ ।॥

ಹೊಂಬಾಳಿ ಕಂಬಗಳಿಮಿಕ್ಷುದಂಡಂಗಳಿಂ । ದಿಂಬುವೆತ್ತೊ
ಪ್ಪುತಿಹ ಚೀನಾಂಬರದ ಛತ್ತು ॥ ಸಂಬಂಧಿಸುತಿಳಿಬಿಟ್ಟಿಹ ಜರದ
ಝುಲ್ಲರಿಗಳಿಂದ ಗಂಧಕ್ಕೆರಗುವ ।॥ ತುಂಬಿಗಳ ಬಳಗಂಗಳ ರವ
ರಂಜಿತಗಳಾ । ದಂಬುಜಮುಖ ಸುಮಮಾಲೆಗಳ ಜಾಲಂಗಳಿಂ ॥
ದಂಬರವ ಚುಂಬಿಪ ಸುರಭಿ ಧೂಪಧೂಮದಿಂ ತೋರಣ ಶ್ರೇಣಿ
ಯಿಂದ ।॥ ೫೩ ।॥

ಸೋಮಸುಂದರ ವದನೆಯರು ಮೇರೆದಪ್ಪಿದ । ಪ್ರೇಮದಿಂ
ತಂದಿಟ್ಟ ಪಂಚಾರತಿಗಳಿಂದ ॥ ಸೋಮಶೇಖರ ವಾರಣಮುಖ ವೀರ
ಕ, ಷಣ್ಮುಖ, ವರನಂದಿ, ಗಿರಿಜೆಯರ ।॥ ಧಾಮನಿಧಿ ರೇಣುಕಾದಿ
ಜಗದ್ಗುರೂತ್ತಮರ । ರಾಮಣೀಯಕಗಳಾಗಿಹ ಬಂಣದಸುಚಿತ್ರ ॥
ಸಾಮುದಾಯಿಕಗಳಾವಳಿಯಿಂದ ವರ ಸಾಲಭಂಜಿಕೆಗಳಿಂದಲಿ ನೆರೆ
।॥ ೫೪ ।॥

ಬಂಧುರವೆನಿಪ ಮಂಟಪದ ಮಧ್ಯರಾಜಿಪ ವಿ । ಗಂಧಶು
ಹ ಗೋಮಯಾದಿ ಷಟ್ಕಗಳಿಂದ ॥ ಲಂದವೆನೆ ಸಮ್ಮಾರ್ಜನ
ಗೈದು ರಂಗವಲ್ಲಿಗಳಿಂದ ಶೃಂಗರಿಸಿದ ॥ ಸುಂದರಹ ಚತು
ವೇದಿಕೆಯೊಳುತ್ತಮರು । ಚಂದಿರನೊಲು ಬಲುಶಾಂತರುರು
ವಂತರು ಸು ॥ ಮಂದೇತರ ಮತಿಮಂತರುಗಳಾದ ವಿಭಿನ್ನ
ಯಾಚಾರ್ಯರಿಂದ ॥ ೫೫ ॥

ಲೀಲೆಯಿಂ ಕೂಡಿಕುಳಿತಿಹ ಮರುಳಸಿದ್ಧಗುರು । ಶಾಲಿ
ಹಶಕ ಪದಿನೆಂಟುನೂರಿಪ್ಪತೆಂ । ಟಾಲಿಸೆ ಪರಾಭವಾಬ್ದ ವರಮಾ
ಕೃಷ್ಣಪಂಚಮಿ ರವಿವಾರದ ॥ ಮೇಲೆನಿಪುದಯದಿ ಸಂಕಲ್ಪ
ಶಾದಿ ತ । ತ್ಕಾಲೀನಮಂಡಪಾಂತೆನಿಪ ಪೂರ್ವಕ್ರಿಯಾ ॥ ಜ
ವನು ಶಾಸ್ತ್ರೋಕ್ತ ವಿಧಿಯಂತೆ ವಿರಚಿಸಿ ಮಹೀಮನಸಿಜಾ
ನುರೆ ॥ ೫೬ ॥

ಮಂಗಲಸ್ನಾನದಿಂ ಶುದ್ಧಾಂಗನನ್ನು ಭವ । ಭಂಗವ
ಗುವ ಭಸಿತಸಿತರೇಖೆಗಳಿಂದ ॥ ಶೃಂಗರಿಸಿದ ಶರೀರನಂ ಶಿವಾಕ್ಷ
ಣಿಮಾಲಿಕೆಗಳಿಂ ಶೋಭಿಸುತಿಹ ॥ ಪಿಂಗದೆ ಧೃತಶುಭ ಕಾ
ಯಾಂಬರದಿ ಸಮು । ತ್ತುಂಗ ಹಿಮಗಿರಿ ಶಿಖರದಂತೊಪ್ಪುವಜ
ಷ ॥ ಪುಂಗವನನುರುವಿನಯದಿಂದ ವಂದಿಸಿ ಕೈಮುಗಿದು ನಿ
ರುವ ಗುಣಿಯನು ॥ ೫೭ ॥

ಸಿದ್ಧಲಿಂಗವಟುವರನಂ ಪಿಡಿದು ಕರದಿಂ ಸು । ಬದ್ಧಾದ
ಪೂರ್ವಮುಖನಾಗಿ ಕೂಡಿರಿಸಿ ॥ ಶುದ್ಧವಾದಧ್ಯಯನದೊ
ಸಿದ್ಧರೆನಿಸುವ ವೈದಿಕರೊಡನೆ ದೇಶಿಕ ॥ ಸಿದೌಷಧಿಗಳ
ಗಾಂಗೇಯ ಕುಂಭಗಳ । ಲಿದ್ದ ತೀರ್ಥಜಲದಿಂ "ದೇವಸ್ಯ" ಯ
ಬುವ ಸು ॥ ಬುದ್ಧಿಮಂಗಲ ಜೀವಿತಕೊಡುವಬ್ಲಿಂಗಗಳೆನಿಸು
ಮಂತ್ರಗಳಿಂದಲು ॥ ೫೮ ॥

ಪಂಚದೇಶಿಕರನಾಹ್ವಾನಿಸುತ ಪೂಜಿಸಿದ । ಪಂಚಕಲಶಗಳ ಪಾವನಜಲದ ಧಾರೆಯಿಂ ॥ ದಂಚಿತ ಪವಿತ್ರ ಸದ್ಯೋಜಾತ ವಾಮ ದೇವಾಘೋರ ಮೊದಲಾಗಿಹ ।॥ ಪಂಚಮಂತ್ರಗಳಿಂದ ರುದ್ರದೇ ಶಾದಶಿನಿ । ಚಂಚನ್ಮನುಗಳಿಂದ ಪದಪಿನಿಂದ ಕರಂ ಪ್ರ ॥ ಪಂಚ ಪರಿಯೆ ಜಗದಾಚಾರ್ಯನಂ ಭೂಶಿವನನಭಿಷೇಕಿಸಿದನು ಗುರುವು ।॥ ೨೯ ।॥

ಅಂತುಕೌಪೀನ ಕಂಥೆಮೊದಲಹ ಮುದ್ರೆಗಳ । ನಂತು ಧರಿಸಿ ಸತೋಯಭಸ್ಮರೇಖೆಗಳನೋ ॥ ರಂತಳಿಕದೊಳಗಿಟ್ಟುರು ಶಿವಾಕ್ಷಮಣಿಗಳಿಂ ಸಮಲಂಕೃತನೆನಿಸಿ ಸಲೆ ।॥ ಕಂತುಹರನಂತೊ ಪ್ಪುತಿಪ ಸಿದ್ಧಲಿಂಗನಂ । ಶಾಂತನಂ ವರರತ್ನಹೇಮಸಿಂಹಾಸನ ದಿ ॥ ಮಂತ್ರವಿದರ ವದನಗಳಂತಖಿಲ ವಾದ್ಯಗಳುಲಿಯೆ ಕೂಡ್ರಿಸಿ ದನು ಯಮಿಯು ।॥ ೩೦ ।॥

ಉತ್ತುಂಗ ಗಾಂಗೇಯ ಗಿರಿರಾಜಶಿಖರದೊಳು । ಮತ್ತೇಭ ಕುಲಭೇತ್ತೃ ಪಂಚಾಸ್ಯನಂತೆ ಸಲೆ ॥ ಯುತ್ತಮೋತ್ತಮ ಸಿಂಹ ಪೀಠದೋಳ್ಮಂಡಿಸಿದ ಸದ್ವೃತ್ತಿಯುಕ್ತಗುರುವಿ ।॥ ನುತ್ತಮಾಂಗ ದೊಳು ಬಂಗಾರದ ಪೆಸರಿನಕ್ಕ । ರೊತ್ತಿದ ಪರಮಪಟ್ಟವನು ಕಟ್ಟಿ ದನು ದೇಶಿ ॥ ಕೋತ್ತಮನು ಪದುಳದಿಂ ನುತಿಪಾಠಕರಖಿಲ ಸಭಿಕ ರು ಜಯ ಜಯವೆನುತಿರೆ ।॥ ೩೧ ।॥

ಭಿನ್ನಶಾಖೀಯ ಸಿಂಹಾಸನಾಧಿಪತಿಗಳ । ಸಂನ್ನಮಾನಸ ರಾಗಿ ಸಾಕ್ಷತಾಶೀರ್ವದಿಸಿ ॥ ಮಾನ್ಯವಹ ವಸ್ತ್ರಾದ್ಯುಪಾಯನ ಗಳಿಂದಾದರಿಸಿದರು ಸಭೆಯು ಜಯವೆನೆ ।॥ ಸನ್ನುತನೃಪೋತ್ತ ಮರು ಭೂವರರು ಧೀವರರು । ಮುನ್ನಣೆಯನಾಂತ ಶಿಷ್ಯಪ್ರಶಿಷ್ಯರು ಭುವನ । ಮಾನ್ಯ ಶಿವಭಜಕರಾದ ಸಭೆಯವರುರು ಕಾಣಿಕೆಯ ನಿತ್ತರು ಬಕುತಿಯಲಿ ।॥ ೩೨ ।॥

ಅಂತರಿಕ್ಷದೊಳನಂತ ನಿಶಾರಮಣರ ಸಂ । ಭ್ರಾಂತಿಯುಂ
ಗುವಂತಹ ಬೆಳ್ಗೊಡೆಗಳೆಸೆಯೆ ॥ ಸಂತಸದಿ ಢಾಳಿಸುವ ಚಾಮ
ಗಳು ವಿಧಿಪುರವಂ ಪಾರುವಂಚೆಗಳೆನೆ ॥ ಸಂತತಂ ಭೋರ್ಗ
ವಾದ್ಯಗಳ ರಭಸಕೆ ದಿ । ಗಂತದಂತಿಗಳ ಕೊಡಕೆಗಳು ಗಡಚಿ
ಭೂ ॥ ಕಂತುಹರ ಗುರುವಿನ ಮೆರವಣಿಗೆಯು ಬಂಗಾರದಡ್ಡಂದ
ದೊಳಾದುದು ॥ ೬೩ ॥

ವೇದದಾರಂಭದೊಳನಾರತ ಸದಾದರದಿ । ನೋದಲ್ಪಡು
ಮಂಗಲಪ್ರಣವವೆಂಬ ಸೊಗ ॥ ಸಾದ ಮಣಿಪಂಜರದಿ ಸುಂದರ
ಶುಕಿಯೊಲು ಶೋಭಿಸುತಿರುವ, ಸುಖಮಯ ॥ ನಾದ ವೇದಾ
ಕೇಳಿ ಸಹಕಾರ ಸಹಕಾ । ರಾದಿ ಪಾದಪ ಕೇಲಿವನರಾಜಿ ಕ
ಕಂಠಿ ॥ ಯಾದ, ದಿವ್ಯಾಗಮವಿಪಿನ ಕಲಾಪಿನಿಯೆನಿಪ ಕಾತ್ಯಾಯ
ಪೊರೆಯೆನ್ನ ॥ ೬೪ ॥



ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳು
ಎರಡನೆಯ ಸಂಧಿ ಪದಂ ೬೪ ಕ್ಕಂ
ಮಂಗಲಮಸ್ತು.







## — ಮೂರನೆಯ ಸಂಧಿ. —

॥ ವಾರ್ಧಿಕ ಷಟ್ಪದಿ ॥

ಸೂಚನೆ ॥ ಕಂತುಘ ಭಜಕವನ ವಸಂತಾಯಮಾನ ಘನ ।
ಶಾಂತಾಂತರಂಗ ಗುರುಸಿದ್ಧಲಿಂಗನಿಗೆ ಸಿ ॥
ದ್ಧಾಂತವನು ಬೋಧಿಸಲು ಕೃಪೆಗೆಯ್ದ ಮರುಳ
ಸಿದ್ಧ ಜಗದಾಚಾರ್ಯವರನು ॥೦॥

ನೀರಜಾಸನ ನೀರಜಾಂಬಕಮುಖ ಸುರವರ । ವಾರ ಮುಕು ಟಮಣಿಗಣಕಾಂತಿಕಲ್ಲೋಲಿನೀ ॥ ಪೂರಹರಿರಂಜಿತ ಸುಕಂಜಯು ಗದಂತಿರುವ ಪದಯುಗಲ ನೀಲಕಂಠ ।॥ ಶಾರದಾಂಬುದಹಾರ ನೀ ಹಾರ ಶೀತಭೋ । ದಾರನಾರದ ಪಾರದವಿಪಾಂಡುರ ಶರೀರ ॥ ತಾರಕಾಂತಕಪಿತ ದಯಾಪಾಂಗ ಗಂಗೋತ್ತಮಾಂಗ ಶಿವನೆ ಪೊರೆ ಯೆನ್ನ ।॥ ೧ ।॥

ಭುವನದೊಳು ವೇದೋಕ್ತಲಿಂಗ ಧೃತಿಯಾದಿ ವಿಷ । ಯ ವನು ಪೇಳುವದರಿಂ ತದ್ವಿರುದ್ಧವಹ ವಿಷ ॥ ಯವನು ಪೇಳದಿರು ವದರಿಂದಲಾಮ್ನಾಯದಂತೆ ಜಗದೊಳು ಮಾನ್ಯಗಳೆನಿ ।॥ ಸುವ ಕಾಮಿಕವೆ ಮೊದಲು ವಾತುಲವೆ ಕಡೆಯಾದ । ದಿವ್ಯ ಶೈವಾಗಮ ಗಳ ಕೊನೆಭಾಗಗಳಲ್ಲಿ ॥ ಶಿವನೊರೆದ ಸಿದ್ಧಾಂತಶಾಸ್ತ್ರವಿರುವದು ಮಗುವೆ ಯದನುಸುರುವೆನು ನಿನ್ನಗೆ ।॥ ೨ ।॥

" ಶಿವಜೀವರೇಕತ್ವವನು ಬೋಧಿಸುವ ವಿದ್ಯೆ । ಯು ವಿಶಬ್ದ
ದರ್ಥವಂತಹ ವಿದ್ಯೆಯೊಳುರೆ ರಮಿ ॥ ಸುವ ಶೈವರಿಹ ವೀರಶೈವ
ರೆನಿಸುವರು ಶಾಸ್ತ್ರಸ್ಥಲದ ಭೇದದಿಂದ ।॥ ತವೆಯಾಚರಣ ಮತ್ತ
ಕೃತಭೇದಬಲದಿಂ । ದವನಿಯೊಳಗಾರುತೆರನಾಗಿ ಕಾಣಿಸುತಿರುವ।
ದವಧರಿಪುದವರಿಂದ ಮಹಿತಮಾದೀಮತವನು ಶಿವನಾದೇಶವನ್ನು
।॥ ।॥ ೩ ।॥ "

ಪೊತ್ತುತ್ತಮಾಂಗದೊಳು ಸೋಮನಾಥಾದಿ ಸ । ರ್ವೋತ್ತ
ಮವೆನಿಸುವ ಶಿವಲಿಂಗಗಳಲವತಾರ ॥ ವೆತ್ತಿ ಸಂಸ್ಥಾಪಿಸಿದರು
ರೇವಣಾದಿ ಪಂಚಜಗದಾಚಾರ್ಯರಿಹದಿ ।॥ ಭೃತ್ಯರೊಳಗನುಕಂ
ಪೆತ್ತರೊಳಗುತ್ತರನೆ । ಮತ್ತೆ ಬಿತ್ತರಿಸವರ ನುತ್ಯವೆನಿಸು
ಸರ್ವ ॥ ವೃತ್ತವನು ನೀನೆಂದು ವಿನಯದಿಂ ಬಿನ್ನೈಸ ಶಿಷ
ಗಿಂತೆಂದರವರು ।॥ ೪ ।॥

ಸಲ್ಲಲಿತ ಸುಕ್ಷೇತ್ರವೆನಿಸಿ ರಾಜಿಸುತಿರುವ । ಕೊಲ್ಲಿಪಾಕಿ
ಸೋಮನಾಥಲಿಂಗದೊಳುದಿಸಿ ॥ ನಿಲ್ಲದೈತಂದು ರಂಭಾಪುರ ಬೃ
ನೃತದೊಳಿಹ ವೀರಸಿಂಹಾಸನ ।॥ ದಲ್ಲಿ ರಾಜಿಸಿದನುರು ರೇವ
ಗುರು ಮೃಗೇಂದ್ರ । ಬಲ್ಲವರವನ ಮಹಾಸೂತ್ರವು ಪಡಿ
ಯೆಂ ॥ ದಲ್ಲದೇಕಾಕ್ಷರಪ್ರವರ, ದಂಡಾಶ್ವತ್ಥ ಬೀಜಾಕ್ಷರ ನ
ರವು ।॥ ೫ ।॥

ಮತ್ತೆ ಕಂಥೆಕಮಂಡಲುಗಳು ಹರಿತಗಳಿರುವ । ವುತ್ತಮ
ನಿಸುತಿರುವ ಶಾಖೆಯದು ರೇಣುಕವು ॥ ನುತ್ಯವಹ ವೀರಗೋತ್ರ
ರು ಸದ್ಯೋಜಾತಮುಖವೆಂದು ಪೇಳುವರು ಪು ।॥ ಣ್ಯೋತ್ತರ
ಕ್ಷೇತ್ರ ರಾಜವಮಾನ ಸುಜನ । ಸ್ತುತ್ಯ ಸಿದ್ಧೇಶಲಿಂಗದೊಳು ಜನ
ವು ವಿಜಿತ ॥ ಚಿತ್ತಜನಿಯಹ ಮರುಳಸಿದ್ಧ ಮುನಿವರ ಮಾ
ಪರತರ ಜಗದ್ಗುರುವಿನ ।॥ ೬ ।॥

ಧೀರನೇ ದ್ವ್ಯಕ್ಷರಪ್ರವರ ವೃಷ್ಟಿಯುಸೂತ್ರ । ಸಾರತರ ತಾಮ್ರಕಲಶಂ ದಂಡಪಾಲಾಶ ॥ ವಾರಿಜಾಂಬಕನೆ ಸದ್ಧರ್ಮ ಸಿಂಹಾಸನವು ಕಂಥೆ ಕೆಂಬಣ್ಣ, ಶಾಖೆ ॥ ದಾರುಕನಿದು ತಿಳಿಯೆ ಮಕಾರ ಮಂತ್ರವೆನಿಪುದು । ದಾರ ನಂದಿಯುಗೋತ್ರ ಸಾರದಿಗ್ದಕ್ಷಿಣವಿ ॥ ಚಾರಿಸೆ ಯುವರವಾಸವುಜ್ಜಯಿನಿಯೊಳಿರುವದು ವಾಮದೇವಾಖ್ಯ ಮುಖವು ॥ ೭ ॥

ಲೋಕೈಕಪೂಜ್ಯನಾಗಿರುತಿಹ್ಯೆಕೋರಾಮ । ನಾಖ್ಯಾತವಾಸವು ಹಿಮಾಚಲದೊಳಗೆ ಭೃಂಗಿ ॥ ಮುಖ್ಯಗೋತ್ರವು ಭೀಮನಾಥ ಶಿವಲಿಂಗದೊಳಗುದಯವು ಪರತರಲಂಬ ॥ ಕಾಖ್ಯಸೂತ್ರವುದಾರ ದಂಡ ವೇಣುವೆನಿಪುದು । ಶಾಖೆ ಘಂಟಾಕರ್ಣ ಕಾರ್ಬೊನ್ನ ಬಣ್ಣದವ ॥ ಲಾಕಮಂಡಲು ಕಂಥೆಗಳು, ಶಿಕಾರವು ಬೀಜಮಂತ್ರವದ ಘೋರಮುಖವು ॥ ೮ ॥

ಪಂಡಿತಾರಾಧ್ಯ ಜಗದಾಚಾರ್ಯನದು ಸುಧಾ । ಕುಂಡದಾ ಮಲ್ಲಿಕಾರ್ಜುನಲಿಂಗದಿ ಜನಿ, ಭೂ ॥ ಮಂಡಿತ ಶ್ರೀಗಿರಿಯೊಳಾವಾಸ ಸೂತ್ರ ಮುಕ್ತಾಗುಚ್ಛ ವೃಷಭಗೋತ್ರ ॥ ದಂಡವು ವಟ, ಪ್ರವರ ಚತುರಕ್ಷರವು ವರ ಕ । ಮಂಡಲವು ಕಲಶವು ಸುಕಾಂಶದವು, ಶಿಷ್ಯನೆ ಅ ॥ ಖಂಡಮಂತ್ರ ವಕಾರ, ಧೇನುಕರ್ಣವು ಶಾಖೆ, ಮುಖವು ತತ್ಪುರುಷವಿಹುದು ॥ ೯ ॥

ವಾರಾಣಸಿಯೊಳು ವಾಸವು, ಸೂತ್ರ ಪಂಚವ । ರ್ಣಾರಾಜಿಸುವ ವಿಶ್ವನಾಥಲಿಂಗದಿ ಜನನ ॥ ಸಾರ ಪಂಚಾಕ್ಷರ ಪ್ರವರ, ಬಿಲ್ವವು ದಂಡ, ಕನಕದ ಕಲಶ, ಕಮಂಡ ॥ ಲೂರುಕಂಥೆಗಳು, ನೆರೆ ವಿಶ್ವಕರ್ಣಾಖ್ಯಶಾ । ಖಾರ್ಯ ಗುಹಗೋತ್ರ, ವೀಶಾನ ವದನವು ಸಲೆ ಯ ॥ ಕಾರ ಬೀಜಾಕ್ಷರ, ಜ್ಞಾನ ಸಿಂಹಾಸನವು ವಿಶ್ವವಂದ್ಯ ಗುರುವರನ ॥ ೧೦ ॥

ಇವರ್ಕೈವರುಪಸೂತ್ರಗಳ ಗುರುಗಳೆಂದೆನಿಪ । ಶಿವರು
ಷಟ್ಪ್ರಾಧಿಕಾರ ಮೊದಲಾದ ಸ ॥ ರ್ವವಿಧ ಕರ್ಮಗಳಲ್ಲಿ ನಿಗ್ರ
ನುಗ್ರಹ ವಿಸರ್ಜನಾಹ್ವಾನಗಳಲ ।॥ ನವರತಿವರು ಸ್ವತಂತ್ರ
ಮನುದ್ರುಷ್ಟ್ಯಗಳು । ತವೆತಿಳಿ ಬ್ರಹ್ಮಚರ್ಯಾದ್ಯಾಶ್ರಮ
ಪಾಲ ॥ ಶಿವರು ವರ ಷಟ್ಸ್ಥಲ ಸ್ಥಾಪಕರಿವರೊಳಗೆ ಗುರುತ್ವ
ಪಾಯವಿಹುದು ।॥ ೧೧ ।॥

ರೇಣುಕನೆ ಮೊದಲಾದ ಗುರುಗಳಿಂ ವೇದಪ್ರ । ಮಾಣ
ಸ್ಥಾಪಿತವೆನಿಸಿದೀಮಹಾಮತದಿ ॥ ಕೇಣವಿರದಷ್ಟಾವರಣ ಸ
ದುಳ್ಳ ಪಂಚಾಚಾರ ಸಂಪನ್ನನು ।॥ ಕ್ಷೋಣಿಯೊಳು ವೀರಶೈವ
ನಿಸುವನೆಂದು ಬುಧ । ಗಣ್ಯರುಸುರುತಿಹರದರಿಂ ಶಿಷ್ಯಶೇಖರನೆ
ಮಾಣದಲೆ ನೀಕೇಳಲಸನಾಗದೆ ವರಸಿದ್ಧಾಂತವನೊರಿಯುವೆ ನಾ
।॥ ೧೨ ।॥

ಗುರುಲಿಂಗಜಂಗಮು ಪ್ರಾಸಾದ ಪಾದೋದ । ವರ ಪ
ವರ್ಣಮಂತ್ರ ಶಿವಾಕ್ಷ ಭಸಿತಂಗ ॥ ಳರಿಯಲಿವುಗಳು ಶಿವಾ
ವರಣಗಳಿಹವೆಂದುಸುರುವರು ಶಾಸ್ತ್ರಜ್ಞರು ।॥ ಚರವರೇಣ
ಯವುಗಳಲ್ಲಿ ಜಿಜ್ಞಾಸ್ಯವೂ । ಪರಬೊಮ್ಮವೂ ಮುಮುಕ್ಷು
ಗಂತವ್ಯವಾ ॥ ಗಿರುವದದರಿಂದ ತಲ್ಲಿಂಗವತಿಮುಖ್ಯವೆಂದೆಣ
ರು ತದಭಿಜ್ಞರು ।॥ ೧೩ ॥

ಆಂತಿರುವ ಶಿವಲಿಂಗದ ನಿಜಸ್ವರೂಪವೋ । ರಂತೆ ತಿ
ಲು ಬುದ್ಧಿವಂತರಾ ಕಂತುದಹ ॥ ನಂತಿರುವನಂ ಮುಕುತಿ ವ
ದೆಯ ರಮಣನಂ ಗುರುವರನಂ ಹುಡುಕುತಲಿಹರು ।॥ ಶಾಂತ
ರ್ತಿಯೆ ಗುಣಿಗುರುವನು ಬಿಟ್ಟು ಮುಕುತಿಯ । ನಾಂತಿ
ಮನುಜನವನು ಭೂವಲಯದೊಳ ॥ ಗಂತಿಲ್ಲದಿರುವ ಮುನಿ
ನ್ನು ತನ್ನ ತೋಳುಗಳಿಂದ ದಾಟಲಿಹನು ।॥ ೧೪ ।॥

ಅದರಿಂದ ಬುಧವರೇಣ್ಯನೆ ಗುಣಿಗುರುವಿರದೆ । ಲ್ಲಿದೊ ಮಾನವಗೆ ಮುಕುತಿಯು, ಮುಕುತಿ ದೊರೆಯದೆ ಸುಖ ॥ ದುದಯವಾಗುವದೇನು ಶಿಷ್ಯಶೇಖರನೆ ತಿಳಿಯೆಂದೆಂದದಾಗದು ಕಣ ।॥ ಪದುಳದಿಂ ಜಗವನುದ್ಧರಿಸಲಾಕಾಂಕ್ಷೆಯಿಂ । ವಿಧುಶೇಖರನು ಪರಮ ಶಿವನು ಸಮನಯನನೆನಿ ॥ ಸಿದ ದಯಾಘನ ಗುರುವಿನಾಕಾರ ಮಾಂತಿಹ ಚರಿಸುವನೆನ್ನುವದಾಗಮ ।॥ ೧೫ ।॥

ಕುಟಿಲನಲ್ಲದ ಮತಸ್ಥಲಜಾತ ಮಹಿಮಾಂಕ । ಸಟೆಯುಪ್ಪ ಸಂಸಾರದೂರ ಸುದಯಾಗಾರ ॥ ತಟಮೀರಿ ಹರಿಯುವಾಶಾತಟಿನಿಯ ಜಲಶೋಷಣ ಚಂಡಮಾರ್ತಂಡನು ।॥ ಕಟುಭಾಷಣ ವಿಭೀಷಣನೆನಿಸದ ಗುಣಭೂಷ । ನಿಟಿಲಾಕ್ಷಪೂಜಕ ನಿಖಿಲ ನಿಗಮಸಾರಜ್ಞ ॥ ಪಟುನೀತಿನಿರತ ಪ್ರಸನ್ನಮುಖಕಮಲಕಲಿತನು ಸನ್ಮತಿಯುತತತನು ।॥ ೧೬ ।॥

ಶಿವಪಂಚವರ್ಣಮಂತ್ರಮುಖರನು ಭವ್ಯಭಸಿ । ತವಿಲಸಿತಗಾತ್ರನು ಶಿವಾಕ್ಷಾಭರಣನು ತವೆ ॥ ಶಿವಜೀವರೇಕತ್ವವನು ಬೋಧಿಸುವದೇ ಮೊದಲೆನಿಸುವ ಧರ್ಮಯುಕ್ತ ।॥ ನವನೇ ಗುರುವರನವನೇ ಮುಕ್ತಿದಾಯಕನು । ಭುವಿಯೊಳಂತಹ ಗುಣವಣುವಿರದಿಹ ಮಾನವನು ॥ ಭವಗೆಡಿಸುವ ಗುರುವಾಗಲವನು ಕರಮಯೋಗ್ಯನೆಂದುಸುರುವರು ಜಾಣರು ।॥ ೧೭ ।॥

ಪಿರಿಪುಲಿಯ ಚರ್ಮವನು ಧರಿಸಿ ವನದೊಳು ಚರಿಸ । ತರುಣಖರವು ಹರಿಣಮೊದಲೆನಿಪ ಮೃಗವನು ತ ॥ ನ್ನುರುತರ ನಖರಗಳಿಂದಿರಿದು ಪರಿದದು ತಿನ್ನದತೆರ ಗುರುವಿನ ವೇಷವ ।॥ ಧರಿಸಿ ಚರಿಸುವ ನರನು ಘೋರಸಂಸೃತಿತಾಪ । ಕಿರದೆ ಪದಕೆರಗಿರುವ ಶಿಷ್ಯನ ದುರಿತವಳಿದು ॥ ವರಮುಕುತಿಯನ್ನಿತ್ತು ನಿತ್ಯಶಾಂತಿಯನೀಯುವನದೆಂತು ಪೇಳ್ಗುಣಿವರ ।॥ ೧೮ ।॥

ಎಳೆಹುಲ್ಲಿಗೆಳಸಿ ಹರೆಯುದ ಮದಕರಿಯು ಬನದ । ಕುಳಿ
ಳಗೆ ಬಿದ್ದಂತುರುವಿಷಯವೆನಿಪ ಹೊಳೆಯ ॥ ಸುಳಿಗೆ ಶಿಲ್ಕಿ ಬ
ಬಳಲುವ ಗುರುವಿತರನುದ್ಧರಿಸುವ ಬಗೆಯೆಂತು ಶಿಲೆಯು ॥
ಳುಗುವ ಶಿಲೆಯನು ತೇಲಿಸುವದೇಯುದರಿಂದ । ಗಳಿಲನೆ ತದ
ಗುರುವನುರೆ ಬಿಟ್ಟು ವಿವೇಕ ॥ ನಿಳೆಯ ಕರುಣಾಳು ಪದಕೆರಗಿ
ನುದ್ಧರಿಪ ಗುರುವಂ ಶರಣ್ಬೊಗುವದು ॥ ೧೯ ॥

ಅರೆಬರಿಸ ಬರಿಸವೊಂದಥವೆರಡು ಬರಿಸಗಳು । ಕರಮಿ
ಯವನೊಲವಿನಿಯವರಿಗೆಡೆಬಿಡದಲೆ ॥ ಪರತರ ಬಕುತಿಯಿಂ ಗು
ವರೇಣ್ಯನಂ ಶರಣ್ಯ ಸುಗಣ್ಯನಂ ಸೇವಿಸೆ ॥ ಕರುಣೆಯಿ
ಪ್ರಸನ್ನನಹ ಗುರುವಿನಡಿದಾ । ವರಿಗೆರಗಿ ನಿಂದು ಕೈಮು
ಪುಲಕಗಳೇಳೆ ॥ ಶಿರಬಾಗಿ ಹರ್ಷಾಂಬು ಕಣ್ಗಳಿಂಜಾರೆ ಕು
ತೋರೆ ಕೋರುವದಲ ॥ ೨೦ ॥

ಭೋಮಹಾಭಾಗ ಕಲ್ಯಾಣಗುಣಧಾಮ ನೀ । ಸ್ವಾಮಿ
ಣಾಥನನೆ ಗುರುವೆ ಮದ್ಗುರುವೆ ನೀ ॥ ಧರ್ಮದಿಂದುರಿ
ಭವದಳಲೆಂಬ ಕಡುಕಾಡ್ಗಿಚ್ಚಿನಿಂದುರೆ ಬೆಂದಿಹ ॥ ಕಾಮ
ಲಾದ ವೈರಿಚಯವೆಂಬುವ ದುರ್ಮೃ । ಹಾಮಯ ನಿಪೀಡಿತ
ಬಂದಿಹೆನ್ನನು ॥ ಸ್ವಾಮಿ ಕಾಪಾಡೆಂದಡಿಗೆರಗುತೆ ಬೇಡಿಕೊ
ಶಿಷ್ಯನಂ ಕೃಪೆಯಲಿ ॥ ೨೧ ॥

ನೋಡಿ ಗುರುರಾಯನವನಲ್ಲಿ ಶಕ್ತಿಯಪಾತ । ಮೂ
ದ್ದಂ ತಿಳಿದು ಮೂರುತೆರನಾದ ಭವ ॥ ವೋಡಿಸುವ ಶಿವ
ಯಿಂದ ಮೋಕ್ಷಾಂಗನೆಯೊಡೆಯನೆನ್ನು ಮಾಡುತಿಹನು ॥
ಯೊಳು ಜನರ ಜನನಮರಣಾದಿ ಭವವ । ನ್ನೀಡಾಡಿ ಕೆಡಿ
ಸಿಂದ ಮಹದುಪಕಾರಿ ॥ ಆದಲೇಂ ಗುರುವು ಸರ್ವಾಶ್ರಮಿಗ
ಲಭಿವಂದ್ಯನಭಿನಂದ್ಯನಿಹನು ॥ ೨೨ ॥

ಎಂತಹ ಬಕುತಿಯೆನು ರತಿಪತಿಹಂತೃವಿನೊಳೋ । ರಂತೆ ಮಾಡುವನೊ ಮನುಜನು ಹಿತೇಚ್ಛೆಯುತನದ ॥ ರಂತೆಯಂತದನೆ ಮಾಳ್ಪುದು " ಯಥೈವ ಶಿವಸ್ತಥಾ ಗುರುಃ " ಎಂದಿರುವದು ॥ ಸಂತತಂ ಕರಣಂಗಳನಧೀನನಾದ ಗುಣ । ವಂತ ಸುಯಶೋವಂತ ಗುರುವರೇಣ್ಯನ ಸೇವೆ ॥ ಯಂತರವಿರದೆ ಸಂತಸುಕ್ಕೇರುತಿರೆ ಗೈಯ್ಯುವನೆನಿಸುವನು ಕೃತಾರ್ಥನು ॥ ೨೩ ॥

ಮಾನಸೀ ವಾಚಕೀ ಕಾಯಕೀಯೆಂದೆಂಬ । ನೂನಸೇವೆಯು ಮೂರುತೆರನಾಗಿಹುದು ಸುವಿ ॥ ಜ್ಞಾನ ನಿಧಿಯೇಕೇಳು ಮಾನಸದಿ ಗುರುರೂಪು ನೆನೆವುದೆ ಮನದ ಸೇವೆಯು ॥ ಭಾನುವುತ್ಸವುತೇಜ ಮದ್ಗುರುವೆ ಗುರುವೆ ನಿಮ । ಗಾನು ಹಿತವೇನು ಮಾಡಲಿಪೇಳಿ ರೆಂದು ಬಹು ॥ ಮಾನದಿಂದಡಿಗಡಿಗೆ ಕೇಳುವದು ವಾಚಕದ ಸೇವೆ ಯೆನಿಪುದು ಭುವನದಿ ॥ ೨೪ ॥

ಗುರುವು ಬರೆ ಮನೆಗೆ ತಟ್ಟನೆ ಕೊಟ್ಟು ಗದ್ದಿಗೆಯ । ಸರಸ ಸುಸ್ವಾಗತವಗೆಯ್ದು ಮಜ್ಜನಕೆಬ್ಬಿ ॥ ಸಿರದೆ ಶಿರಕೆಂಣೆಯೂಡಿ ನಖರಗಳಿಂ ಕೆರೆದು ಕೂದಲುಗಳನು ಕದುಷ್ಣ ॥ ಪರಿಮಳೋದಕ ವಿಂ ಜಳಕಕಿತ್ತು ಶಿವಪೂಜೆ । ಯುರುಮಂದಿರದಿ ಸಾರಣೆಯನು ಗೆಯ್ದು ಪದಪಿಂ ॥ ಸುರಭಿ ಸುಮಬಿಲ್ವದಳಗಳಣಿಮಾಡುವದು ಮೊದಲಹ ಸೇವೆಯಾಂಗಿಕವದು ॥ ೨೫ ॥

ಶ್ರೀಗುರುವರಗೆ ಬೇಕಿಹ ನವವಸ್ತುಗಳನ್ನು । ರಾಗದಿಂ ಬೇಗದಿಂ ಬೆಲೆಬೇಡದೆ ಕೊಡಿಪುದು ॥ ಯೋಗ್ಯವಹುದು ಬಡವನಿರಲು ಸೇವಿಪುದು ಸದ್ಗುರುವು ಭಕ್ತಿನಿಷ್ಠನಹನು ॥ ಯೋಗವಿದ್ಗುರುವ ರೇಣ್ಯನ ಪಾದಪಂಕಜ ಪ । ರಾಗಯೋಗದಿ ಧನ್ಯನಾಗಲು ಬರಿಗೈಯ । ನಾಗಿ ಪೋಗಲು ಬಾರದವನಲ್ಲಿಗೆ ಕದಾಪಿ ನರನು ನೃಪನಲ್ಲಿಯಂತೆ ॥ ೨೬ ॥

ಪಂಡಿತನಿರಲಿ ಪಾಮರನಿರಲವ ವಸುಮತಿಯ । ಮಂಡಲ
ನಾಳುವನಿರಲಿ ಕೀಳನಾಗಿರಲಿ ॥ ಮಂಡೆಬೋಳಿಸಿಪ ಸನ್ಯಾಸಿಯ
ರಲಿ ಸಂಸಾರಿಯಾಗಿರಲಿ ದಾನ ॥। ಶೌಂಡನಾಗಲಿ ಯಾವ
ಆಗಲಿ ಗುರುವಾ । ತಂಡಸಂ ನಾಚಿಕೆಯನಭಿಮಾನವಂ ಬಿಟ್ಟ
ಖಂಡತರ ಭಕ್ತಿಯಿಂ ನಮಿಪುದುಪಚಾರಗಳೊಳು ನತಿಸುವ
ಹಿತಗಳು ।॥ ೨೭ ।॥

ಮರೆದೊಮ್ಮೆ ಗುರುದರಂತೇವಾಸಿ ದುರ್ಗಮುರು । ದುರಿತ
ನನ ದವಾನಲನಾದ ಪರಮು ಸ ॥ ದ್ಗುರುವಿನಪವಾದವಂ ನು
ಬಾರದು ತಾನುಮಾಡುವವನಿಂದಲದನು ।॥ ಧರೆಯೊಳಗೆ ಕೇಳ
ರದು, ಕೇಳಿ ನಿಂದಿಸುವ । ನರೆ ಪಾತಕಪ್ಪುದದರಿಂದವನನುರು
॥ ನಿರೆ ಜರೆದು ಶಾಶಿಪುದಶಕ್ತನು ಸರಿದು ದೂರಪೋಗುವಸು
ನಿಪುದು ।॥ ೨೮ ।॥

ತಾಯಿತಂದೆಗಳಂಣ ತಮ್ಮಕ್ಕತಂಗಿ ಬಲು । ಮಾಯೆ ವ
ತೆಯನುಳ್ಳ ಜಾಯೆ ಮೊದಲಾಗಿರುವ ॥ ಕಾಯಸಂಬಂಧಿಗ
ಗುರುವಿನೊಳತಿದ್ರೋಹವನೆಸಗುತಿರೆ ಯವರನ್ನು ।॥ ಬಾಯ
ತಲ್ಲ ಜರೆಯುತೆ ದೂರವಾಳ್ಪುದ । ನ್ಯಾಯವಲ್ಲವು ಮತ್ತೆ ಗು
ವಿನೊಳರಿತನವನು ॥ ಗೆಯ್ಯುವ ಪರರೊಳು ಮೈತ್ರಿಯೊಳಿ
ಶಿಷ್ಯನರಿಯಿರದೆ ಮತ್ತೇನು ಜಗದಿ ।॥ ೨೯ ।॥

ಆಚಾರ್ಯಶೇಖರನ ಧನವನಪಹರಿಸನಂ । ನೀಚಭಾವ
ಗುರುವಿನಿದಿರಿನೊಳು ಮಾನವಂ ॥ ಯಾಚಿಸುವಧಮನಂ ನೆರೆ
ರಧರ್ಮದಿಂ ಗುರುದೇವನಂ ನರನೆನು ।॥ ತುಚ್ಛರಿಪ ಚಂಡಾಲ
ನನ್ನು ಹಾಗೆ ಸಂ । ಕೋಚಭಾವವನು ಚಾರಿತ್ರದೊಳು ತಳೆ
ವ ॥ ನೀಚನಃ ಯಮರಾಜಭಟರು ಕುದಿಯುವ ನಾಯಕ ನರ
ಚಲ್ಲುವರಲ ।॥ ೩೦ ।॥

ಮಘವದಾದಿ ಸುರಮಯದೇಹವುಳ್ಳಹ, ನಿಖಿಲ । ನಿಗಮಾಗಮೌಘಪ್ರಥಿತ, ಮಹಾಮಂತ್ರಂಗ ॥ ಉಗಮಾತ್ಮನುಳ್ಳಂತು ಸರ್ವತೀರ್ಥಕ್ಷೇತ್ರಗಳ ನೆಲೆಯೆನಿಪ ಗುರುವನು ।॥ ಸುಗಮವಹ ಭಕ್ತಿಯಿಂ ಪೂಜಿಪುದು ಮಾನಿಪುದು । ಮಗುವೆ ಮಹಿಮಾಕರ ಗುರುವರನ ಸುಪೂಜೆಯಿಂ ॥ ದಗಣಿತ ಗುಣಮಣಿಗಳು ಮುಕ್ತಿಮದಿರಾಕ್ಷಿಯಕ್ಷಯ ಸುಖದೊಳಿರುತಿರುವರು ।॥ ೩೧ ।॥

## ಲಿಂಗತತ್ತ್ವ ನಿರೂಪಣಂ

ಪೇಳುವೆನು ಬಳಿಕ ಶಿವಲಿಂಗತತ್ತ್ವವನು ಸಲೆ । ಕೇಳು ನೀಂ ಕೇಳಿದವ ಪೂತಾತ್ಮನಾಗುವನು ॥ ಬಾಳನೇ ತೋರುವೀನಿಖಿಲ ಭುವನಾವುದರಲಿ ಲಯವನುದಯವನು ನೆರೆ ॥ ತಾಳುವದದುವೆ ಸಚ್ಚಿದಾನಂದ ಶಿವಲಿಂಗ । ಹೇಳಹೆಸರಿಲ್ಲದಿಹ ಪರಬೊಮ್ಮವೆನಿಸುವದ ॥ ನಾಲಿಸನೆ ಪರಿಮಾಣದಾಧಿಕ್ಯದಿಂ ವ್ಯಾಪಕದಿನದುವೆ ಬೊಮ್ಮವಹುದು ।॥ ೩೨ ।॥

ವೇದಶೈವಾಗಮ ಪುರಾಣಶಾಸ್ತ್ರದಿಗಳು । ಬೋಧಿಸುವವು ಶಿವಲಿಂಗದ ಧಾರಣವತಿಶಯ ॥ ವಾದರೀತಿಯಲಿ ಸದ್ಭಾವಿತನೆ ಋಗ್ವೇದದ "ಪವಿತ್ರಮಿತಿ" ಮಂತ್ರವು ।॥ ವೇದ್ಯವಹ ಶಿವಲಿಂಗ ಧಾರಣವ ಪೇಳಿ ವರ । ಮೋದದಿ "ಅತಪ್ತತನು" ಯೆಂಬುವದರಿಂ ಲಿಂಗ ॥ ವಂ ದೀಕ್ಷೆರಹಿತನು ಧರಿಸಬಾರದು, ಧರಿಸಲು ಪಾಪಿಯೆನ್ನುವದವನನು ।॥ ೩೩ ।॥

"ಯಾ ತೇ" ಯೆನಿಪ ಯಜುರ್ವೇದ ಮಂತ್ರೋಕ್ತಿಯಿಂ । ನೀತಮಾನಸನೆ ತಲ್ಲಿಂಗಸಂಯೋಗದಿಂ ॥ ಪೂತಾತ್ಮನಾಗುವನು ಮಾನವನು ಭೂಮಿಯೊಳೆಂದು ತಿಳಿಯಲ್ಪಡುವದು ।॥ ಸಾತಿಶಯದಿಂದ "ಯಶ್ಛಂದಸಾ" ಮೆಂಬುತಿರು । ವಾತತಾ ತೈತ್ತಿರೀಯವು ಲಿಂಗಧಾರಣವ ॥ ನೋತುಪೇಳುವ "ದಯಂಮೇ" ಯೆಂಬುವದರಿಂ ಕರದೊಳು ಲಿಂಗಧೃತಿಯುಹುದು ।॥ ೩೪ ।॥

ಓಗೆ ವೇದಾದಿ ವಚನಗಳ ಸತ್ಪ್ರಮಾಣ್ಯ । ದಿಂ ಗೇ
ಯಜನೀಯವಾದಲಿಂಗವು ಧಾರ್ಯ ॥ ವಾಗಿಹುದರಿಂದಲೆ ಮುಕ
ಸಂಕ್ರಂದನಾದ್ಯಖಿಲ ಬೃಂದಾರಕರು ಸು ।॥ ಯೋಗವಿನ್ನಾ
ದಿ ಸುರಮುನಿಗಳು ಗೌತ । ಮಾದಿ ಮರ್ತ್ಯಮುನಿಗಳು, ಕಮ
ಲಯಾದಿ ಸುರ ॥ ನಾಗವೇಣಿಯರಾವಗಂ ಪರಮಲಿಂಗವ
ಧರಿಸಿರುವರು ಕಣ ।॥ ೩೫ ।॥

ಮರ್ತ್ಯಭುವನದೊಳಗಾಯಾಯ ಸತ್ ಕ್ಷೇತ್ರಗಳ ।
ಯಿಂದಲಿ ಮಹಾಮಹಿಮಶಾಲಿಗಳೆಂದು ॥ ಕೀರ್ತಿವೆತ್ತ
ಷೋತ್ತಮರು ವಿಧಿಯಿಂ ಸ್ಥಾಪಿಸಿಹ ಪದ್ಮನಾಭಶಿಲೆಯು ॥
ರ್ತಿಗಳ ಮತ್ತೆ ಪದ್ಮಾಲಯಾದಿ ಲಲನಾ । ಮೂರ್ತಿಗಳ ಶಿ
ಲ್ಲುರಗಳಲ್ಲಿ ಸದಾಽಷ್ಟ ॥ ಮೂರ್ತ್ಯಭಿನ್ನ ಶಿವಲಿಂಗದ ಧಾರಣ
ತೋರುವದು ಗುಣಮಣಿಹಾರನೆ ।॥ ೩೬ ।॥

ಕರುಣಾಳುವಾದ ಗುರುದೇವನು ಯಥಾಶಾಸ್ತ್ರ । ಕರುಣೆ
ಸಂಸ್ಕರಿಸಿ ಕೊಟ್ಟಿಷ್ಟಲಿಂಗವನು ॥ ಮರೆಯದೆ, ಶ್ರದ್ಧೆಯಿ
ನಿಮಿಷವಾದರಗಲದೆ ಶರೀರದೊಳು ಧರಿಸಿ ।॥ ಕರಕಮಲಪೀಠ
ಳ್ಪರಿಶುದ್ಧವಾರಿಯಿಂ । ದಿರದೆ ಮಜ್ಜನಭಸಿತ ಗಂಧಾಕ್ಷತ ಸು
॥ ಸುರಭಿ ಕುಸುಮಾದಿಯಿಂ ದಿನದಿನದಿ ಪೂಜಿಸುವವನು ಶಿ
ನು ಭುವನದಿ ।॥ ೩೭ ।॥

ವರಲಿಂಗಧಾರಣವೊಳಹೊರಗೆಂದೆರಡು ತೆರ । ವಿರು
ರೊಳು ಚಿದ್ಘನ ಶಿವಲಿಂಗವನು ಹೃ ॥ ತ್ಸರಸಿಜದಿ ಜಾ
ಯಾಂತರಧೃತಿಯೆನಿಸುವದಾಲಿಂಗವಾವಾಗಲು ।॥ ನರರನಾ
ಳುಳ್ಳ ಮೂಲಕಮಲದೊಳು ಪ । ನ್ನೆರಡೆಸಳಿನ ಹೃದಯಾಬ್ಜ
ಳು ಹುಬ್ಬುಗಳ ನಡು ॥ ವಿರುವೆರಡೆಸಳಿನ ಕಂಜದೊಳು
ಯ ನೇಸರನಂತೆ ತೋರುವದಲ ।॥ ೩೮ ।॥

ಯೋಗಬಲ್ಲಿದನು ಪೇಳಿದ ಮೂರರೊಳು ಕರಂ । ಯೋಗ್ಯವೆನಿಪೊಂದರೊಳು ತೈಜಸ ಸುಲಿಂಗಾನು ॥ ಯೋಗವನೆಸಗುವನದನಾಂತರದಿ ಲಿಂಗಧೃತಿಯೆಂದುಸುರುವರು ವಿಬುಧರು ।॥ ನೀಗಿಭವಬಂಧನಗಳನು ಬೇಗನೆ ಚಿರಸುಖ । ಕಾಗಿ ಮುಕುತಿ ಮುಗುದೆಯ ಕೂಡಲಿಚ್ಛಿಸುವವನು ॥ ಭೋಗಿಭೂಷಣ ಶಂಭುವನ್ನು ದಹರಾಕಾಶದಿ ಧ್ಯಾನಿಪುದನುದಿನವು ।॥ ೩೯ ।॥

ಅಂತರನುಸಂಧಾನದಿಂ ದುಃಖಗಳ ಸುಕರ । ಮಂತವಾಗುತಿರೆ ಹೊರಗೇತಕೆನಲಾಗದೈ ॥ ಕಂತುಹರನನ್ನಾಂತರ ಧರಿಸಲು ಶಕ್ತ್ತನಿರಲವನಶಕ್ತ್ತನಿರಲಿಹದೋ ।॥ ರಂತೆ ದೇಹದ ಪಾತದವರಿಗು ಶರೀರದ । ಲ್ಲಂತಿಂತೆನದಲೆ ಧರಿಸಲು ಬೇಕಗಲಿದರೆ ಸು ॥ ಶಾಂತಿಮಯ ನಿತ್ಯಸುಖವಿಲ್ಲೆಂದು ಪೇಳುವರು ನಿಗಮವಿದರು ಜಗದೊಳಗೆ ।॥ ೪೦ ॥

ಸ್ಥೂಲ ಸೂಕ್ಷ್ಮವು ಕಾರಣವೆನುತಾಲಿಂಗವು ಸು । ಶೀಲಲೋಲನೆ ಮೂರುತೆರನುಂಟದಿಷ್ಟವು ॥ ಸ್ಥೂಲವೆನಿಪುದು ತನುವಿನಲಿ ಸತತ ಧರಿಸಲ್ಪಡುವ ಮನೋತೀತ ಬೊಮ್ಮ ।॥ ಲೀಲೆಯಿಂದನಿಷ್ಟವ ಪರಿಹರಿಸಿಷ್ಟವಂ । ಪಾಲಿಸುವದದರಿಂದುಸುರುವರು ಪುರಾವಿದರು ॥ ನೀಲಲೋಹಿತ ರೂಪವೆನಿಸಿಷ್ಟಲಿಂಗವನು ಭೂವಲಯದೊಳು ಶಿಷ್ಯನೆ ।॥ ೪೧ ।॥

ಶಿರದೊಳು ಗಲದೊಳು ಭುಜದೊಳಗಿಲ್ಲವೆಯುರದೊಳು । ದರದೊಳಥವಾ ಕರದೊಳಗೆ ತಿಳಿದ ಮಾನವರು ॥ ಧರಿಸುವದು ಶಿವಲಿಂಗವಂ ಸಾವಧಾನ ಮಾನಸದಿಂದಲಾವಾಗಲು ।॥ ಚರವರನೆ ನಾಭಿಯಕೆಳಗೆ, ಜಡೆಯ ತುದಿಯೊಳಗೆ । ಮರೆದಾದರು ಮಲಸ್ಥಲದಿ ಪೃಷ್ಠಭಾಗದೊಳು ॥ ಧರಿಸಬಾರದು ಲಿಂಗವಂ, ಧರಿಸಲವನು ಪಾಪದವನಾಗುವನು ಜಗದಿ ।॥ ೪೨ ।॥

ಅಂಗದೊಳು ಹೃದಯಂಗವು ಶಿವಲಿಂಗಧೃತಿಯಿಂ । ಸ
ತನೆನಿಪ ವೀರಶೈವನುರುಭಾವನಾ ॥ ಭಂಗುರನೆನಿಸಿ ಹಸ್ತ
ದೊಳು ಜಲಭಸಿತ ಗಂಧಾಕ್ಷತ ಸುಮಬಿಲ್ವ ॥ ಮಂಗಲಮಯ
ದೀಪ ಧೂಪಾದಿ ಸದುಪಕರ । ಣಂಗಳಿಂದಿಷ್ಟಲಿಂಗವನು ಸಲೆ
ಜಿಪುದು ॥ ಲಿಂಗಾರ್ಚನೆಗೆ ಬಾಹ್ಯಪೀಠಕಿಂತ ಕರಪೀಠವೆ ಲೇಸು
ವರು ಬುಧರು ॥ ೬೩ ॥

ಓಗೆ ಗುರುಕಾರುಣ್ಯಬಲದಿಂದ ದೀಕ್ಷಾ ಸು । ಯೋಗ
ಪರಿಶುದ್ಧನಾಗಿ ಲಿಂಗವನು ಯಾ ॥ ವಾಗಲಂಗದೊಳು ಧರಿಸಿ
ಪೂಜಿಸಿ ತತ್ಪ್ರಸಾದವನನುಭವಿಸುವನೆ ॥ ಭಾಗ್ಯಶಾಲಿಯ್ಯವ
ಕರ್ಮವು ಹುರಿದಬೀಜ । ವಾಗುವದವನ ಮಾತೃಪಿತ್ರಾದಿಗ
ಪುಣ್ಯ ॥ ಭಾಗಿಗಳು ಪೂರ್ವದೊಳಜಾಮಿಳನು ಲಿಂಗನಿಷ್ಠೆಯ
ಗಣಪದ ಸೇರಿದ ॥ ೬೪ ॥

## ಜಂಗಮ ತತ್ತ್ವನಿರೂಪಣಂ.

ಲಿಂಗತತ್ತ್ವವನು ನಾಂ ಸಂಕ್ಷೇಪದಿಂ ಸಿದ್ಧ । ಲಿಂಗ ಶಿಷ
ತ್ತ್ವಮನೆ ಪೇಳಿದೆನು ನಿನಗೀಗ ॥ ಜಂಗಮತ್ವವನು ಬಿತ್ತರಿಸುವೆ
ಸಾವಧಾನದಿ ಯಾಲಿಸುವದು ಮಗುವೆ ॥ ಅಂಗದಾ ಮಾಂ
ಯ ಪಿಂಡತ್ವವನು ಕಳೆದು । ಪಿಂಗದಲೆ ಮಂತ್ರಮಯ ಪಿಂಡ
ವನು ಮಾಳ್ಪ ॥ ತುಂಗಮಹಿಮಾಕರ ಗುರುವಿನಿಂದ ದೀಕ್ಷಾತ್ರ
ಬಲದಿಂ ಶುದ್ಧನೆನಿಸಿ ॥ ೬೫ ॥

ಗುರುಕುಲದೊಳಾಚಾರ್ಯ ದಿವ್ಯಸನ್ನಿಧಿಯಲ್ಲಿ । ವರವ
ವೇದಾಂತ ಸಿದ್ಧಾಂತಶಾಸ್ತ್ರಗಳ ॥ ನುರೆಕಲಿತು ಪೂರ್ವಕಾಲ
ಸಂಸ್ಕಾರೋತ್ಕಟತೆಯಿಂದಖಿಲ ವಿಷಯ ವಿ ॥ ಸರದಿ ಮಾಂತ
ವಿಷ್ಠಾದಿಗಳೊಳಂತೆ ಸಲೆ । ವಿರಸಭಾವಮನಾಂತ ಮಾಹೇಶ
ಶ್ರೀಯನು ॥ ಸರಿಸಿದ ವಿರಾಗಿತ್ವವು ದೃಢವಿರೆ ಸನ್ಯಾಸವೆಂಬ
ಮವ ನೈದುವ ॥ ೬೬ ॥

ಶ್ರೀಗುರುವಿನುಪದೇಶಮಾರ್ಗದಿಂದಖಿಲ ನಿಗ । ಮಾಗಮಂಗಳ ಸಾರವೆನಿಪ ತತ್ತ್ವಮಸಿ ವಾ ॥ ಕ್ಯಾಗತಾರ್ಥವೆನಿಪಾಲಿಂಗಾಂಗ ಸಾಮರಸ್ಯಜ್ಞಾನಮಂ ಪಡೆದನು ।॥ ರಾಗದಿಂ ಪ್ರತಿದಿನಾಭ್ಯಾಸ ದಿಂದಲತಿಧೃಢ । ಪಾಗೆಯಪರೋಕ್ಷ ವಸ್ತುವು ತಾನೆನಿಸಿಚರಿಪ ॥ ನಾಗ ಜಗವಂ ಬ್ರಹ್ಮಮಯವಾಗಿ ಕಾಣುವನು ಬೇರೆ ಕಾಣನವನಿಹದಿ ।॥ ೪೭ ।॥

ಕಾರಮಿಂಚಿನತೆರದಿ ತೋರಿಯಡಗುತಿಹ ಸಂ । ಸಾರ ನಿಸ್ಸಾರಸುಖದ ಗೊಡವಿಯ ಜೋರಿನಿಂ ॥ ದೂರಿಕರಿಸಿ ನಿರಾಕುಲ ನಿಜಾನಂದ ಸಾಂದ್ರನೆನಿಸಿ ಚರಿಪನು ಚರನು ।॥ ಧೀರನತಿನಿರ್ಮಲನು ನಿತ್ಯಬುದ್ಧನಿರಹಂ । ಕಾರನು ನಿರಾಮಯನು ನಿರ್ಮಾಯನುರೆ ನಿರಾ ॥ ಕಾರಪರನು ನಿರಪಾಯನೆನಿಸಿರುವನು ನಿರಾಭಾರಿಯೆನಿಸುವನು ಜಗದಿ ।॥ ೪೮ ।॥

ಲೋಕದೊಳು ಮಾನವಾಗತಿ ತುಷ್ಟಿವಡೆಯದಿಹ । ಕಾಕುಜನದಿಂದಲಪಮಾನೊದಗೆ ಕೋಪಿಸದ ॥ ನೇಕಪದೊಲು ಗಭೀರತನದಿಂದಿರುವ ಜರಾಮರಣಗಳಿಗಳುಕದ ಭುವಿ ।॥ ಬೇಕು ಬೇಡೆಂಬು ವಿಷ್ಟಾನಿಷ್ಟಗಳಿರದ । ಶ್ರೀಕನೊಳು ಸಶ್ರೀಕನೊಳಗೆ ಸಮತೆಯುತನತ ॥ ಲೋಕವವಲೋಕನಾಶೀರಾದಿಯಿಂದುದ್ಧರಿಸುತೆ ಚರಿಸುವನು ಚರನು ।॥ ೪೯ ।॥

ಹೊಟ್ಟೆಹಸುವಿಗೆ ಬಿಕ್ಕಿ ಅಳುವಮಗುವಂ ತಾಯಿ । ನಿಟ್ಟುಸುರಿಡುತೆ ಮೊಲೆಯುಣಿಸಿ ತಣಿಸುವಂತೆ ಬಹು ॥ ಕೆಟ್ಟಹ ವಿಷಯಚಯವಿಷದ ಬೇಗಿಗೆ ಮನಸುಟ್ಟು ಸಿಡಿಮಿಡಿಗೊಳ್ವಜನದಿ ।॥ ನಟ್ಟುದುಃಖವನು ದೂರಿಕರಿಸುತೆ ನೆರೆ ಮನ । ದಟ್ಟುವಂತೆ ಕೃಪೆಯಿಟ್ಟುರುಬೋಧಸುಧೆಯ ನುಣ ॥ ಕೊಟ್ಟವರ ಮನದಣಿಸುತೆ ಶಿವಯೋಗಿವರನೊಂದೂರಲ್ಲಿರದೆ ಚರಿಪನು ।॥ ೫೦ ।॥

ಮರೆದಾದರು ಗೃಹಿಯ ಗೃಹದೊಳಗಿರಬಾರದುರು । ಪ
ಹಂಸನೆನಿಪ ಯತಿಯಿರುತಿರೆ ಯವನನ್ನು ॥ ಬಲದಿಂದ ಮೋ
ಳಿಸಿ ಯಧೋಗತಿಗಿಳಿಸುವದು ವಿಷಯಿಯ ಸಂಸರ್ಗವು ॥ 
ತಾಂಬೂಲವನತಿಮೃದುವಾದ ಶಯನವೆ । ಸುರಭಿಚಂದನ
ಲೇಪನವ ಕೇಶಸಂ ॥ ಸ್ಕರಣವಭ್ಯಂಗಾಂಗಮರ್ದನವೆ ನೋ
ದುದನು ವರ್ಜಿಪುದು ವಿರತನು ।॥ ೫೧ ।॥

ನೋಡುವದನು ಮರೆಮಾತಾಡುವದು ಮೈಯ್ಯವು । ಟ್ಟಾ
ದನೊಂದಾಸನದಿ ಕೂಡುವದನು ನಗಿ ॥ ಯಾಡುವದನುರುಜ
ದುಡುಪತಿವದನೆಯರೊಡನೆ ಬಿಡುವದೈ ವಿರತನು ।॥ ತಾಡನದ
ಧನವೆನಿಪ ಬಾಣಬಿಲ್ಲು ಹೆದೆ । ಮೂಡಿಗೆ ಮೊದಲೆನಿಸುವ ಕೈದು
ಧಾರಣವ ॥ ಮಾಡಬಾರದು ಕದಾಪಿ ಕರದೊಳು ಮಾಡುವದು
ಪೂಜೆಯನ್ನು ಚರನು ।॥ ೫೨ ।॥

ಶರೆಮನೆಯನು ಸೂಡಬಲಿಯನು ಜಿನಾಗಾರವನು । ರಣ
ಮಿಯ ಸೇರಬಾರದು ಕದಾಪಿ ಭುವಿ ॥ ವರನಿರಾಭಾರಿ ಸೇರು
ಭಿಕ್ಷೆಯಗಾಗಿ ಶಿವಭಕ್ತರ ಮನೆಯನ್ನು ।॥ ಕರಿರಥಾಶ್ವಾಂದು
ಕಾದಿ ವಾಹನವತಾ । ಮರೆದಾದರೇರಬಾರದು ಬುದ್ಧಿವಂತ
ಚರವರ್ಯನೇರುವದು ಪಶುಪತಿಪರಶಿವಪೂಜೆಗೆ ಗದ್ದುಗೆಯ
ದದಿ ।॥ ೫೩ ।॥

ವಾಣಿಜ್ಯವಕ್ಕಲತನ ಮೊದಲಾದ ನರರೊಳು । ಕಾ
ವ್ಯವಹಾರವ ತ್ಯಜಿಸಬೇಕು ಸಲೆ ॥ ಜಾಣನು ಜಿತೇಂದ್ರಿ
ಜಂಗಮನು ರಸರಸಾಯನವಂ ವಶೀಕರಣವ ।॥ ಮೋಣಧಿಕ
ವೀಯುವ ಜಾರಣವು ಹಾಗೆ । ಭಾನುಮತಿಯುರು ಭೂತವ
ಮಂತ್ರವದು ॥ ಮಾಣದವನೊಳು ಕುಟಿಲ ಕುಹಕ ಯಂತ್ರ
ವಿಚಾರವಿರಕೂಡದು ಗಡ ।॥ ೫೪ ।॥

ಮೂರನೆಯ ಸಂಧಿ

ಬೋಳಿದಲಿ ಯಥವಾ ಜಡೆಯನು ಧರಿಸಿದ ಭಾಲ । ದೋಳುರು ಭವಗೆಡಿಸುವ ಭಸಿತವನಿರಿಸಿದ ಮನು ॥ ಜಾಳಿಯನ್ನವಲೋಕನಮಾತ್ರದಿಂ ಪಾವನವಗೆಯ್ವ ಕಾವಿಕಪನಿಯುನು ।॥ ಮೇಳದಿಂ ಮುಂಡಿಸಿದ ಪಂಡಿತಪ್ರವರನು ದ । ಯಾಳು ವರಪಾಣಿ ಪಾತ್ರನು ಭೂಶಯನಶಾಯಿ ॥ ಭಾಳಲೋಚನಭಕ್ತನೇಕಾಂತರತಿಯಾತ್ಮರಾಮಸಾಕ್ಷಾತ್ಸಂದನು ।॥ ೫೫ ।॥

ಇಂತಲಕ್ಷಣ ಲಕ್ಷಿತನೆನಿಸುವ ಶಿವಯೋಗಿ । ಕಂತುಹರನಂತೆ ಮಹಿಮೋಲ್ಲಸಿತನೆಲ್ಲಿಹನೊ ॥ ಸಂತತಂ ಸುಕ್ಷೇತ್ರವೆನಿಸುವದೆಲ್ಲಿ ಮಜ್ಜನವ ಮಾಡುವನದುವೆ ನಿ ।॥ ತಾಂತಮುಕ್ತಿಯನೀವ ತೀರ್ಥವೆನಿಪುದು ಜಗದೊ । ಳಂತಹ ವಿರಕ್ತವರನ ಕಟಾಕ್ಷಕಿರಣಗಳು ॥ ಸಂತಸದ ವಚನವಂಘ್ರಿಗಳ ಧೂಳಿಯು ತಿರಿಗಿಬಾರದ ಪದವಕೊಡುವವು ।॥ ೫೬ ।॥

ಇಂದುಧರನೊಂದು ಮೂರ್ತಿಯ ಮೂರುಭಾಗಗಳ । ಲೊಂದೆನಿಸುತಿಹ ಜಂಗಮ ಸುಮೂರ್ತಿಯಂ ಭಕ್ತ ॥ ಬಂಧುರೆರೆನಿಪನೇಕರುರು ಭಕ್ತಿಯಿಂದ ಸಲೆ ಪೂತರಾಗಿ ಪರಮಗುರು ।॥ ಸಿಂಧೂತ್ತಮಾಂಗ ಲಿಂಗಗಳಂತೆ ಭುವನದೊಳು । ಗಂಧಾದಿಯಿಂ ಪೂಜಿಸಿ ಧ್ಯಾನಿಸಿ ಸತತಂ ॥ ಮುಂದೊದಗುವ ಜನನೀ ಜಠರಶಯನಾದಿ ಭವ ದುಃಖಗಳ ನೀಗಿದರಲ ।॥ ೫೭ ।॥

ಗೌರಿ ಗಿರಿವರಕುಮಾರಿ ಕುಮಾರಪಿತನುರೆ ಶ । ರೀರಾರ್ಧಹಾರಿಣಿ ಸುವಾಣಿ ಫಣಿವೇಣಿ ದೇ ॥ ವಾರಿವಾರಣವಾರದಾರಣ ಸುಪಂಚಾಸ್ಯ ವಾಹನೀಕೃತಕೇಸರಿ ।॥ ಕಾರುಣ್ಯಕಲಿತ ಕಮನೀಯನೇತ್ರಾಂತೆ ಶಿವೆ। ಸಾರಮುಖಸಾರಸ ಪರಾಜಿತಸರಸಿಜಾರೆ ॥ ನಾರದಾದಿ ಮುನಿಮಾನಸರತ್ನಘನದೀಪೆ ತಾಯೆ ತಾಯೆನಗೆ ಸುಖವ ।॥ ೫೮ ।॥



ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರರಾಯ
ಮಾಹೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳು
ಮೂರನೆಯ ಸಂಧಿ ಪದಂ ೫೮ ಕ್ಕಂ
ಮಂಗಲಮಸ್ತು.







## — ನಾಲ್ಕನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ— ಪಂಚಾನನ ಭಜನಾಂಚಿತ ಸಿದ್ಧಲಿಂಗನಿಗೆ ।
ಪಂಚಾಕ್ಷರ ಮೊದಲ್ಲಾದುಳಿದಾವರಣಗಳನ ॥
ವಂಚನೆಯಲಿಂ ಚರದಗುರುವರ್ಕನಂತಃಕರಣದಿಂದ
ಬೋಧಿಸಿದನು ।೦॥

ಸರಸಿಜಸದನ ಸಾರಸನಯನ ಮುಖಸುರರಂ । ಪರಿವಾರಸಹಿತರಂ ಕರಮಂಜಿಸಿ ಸಂಭಂಜಿ ॥ ಸಿರದೋಡಿಸಿ ಭುವನವಧಹಿಪ ಭೀಕರಗರಲಮಂ ಪರತರ ಕೃಪೆಯಿಂದ ।॥ ಪರಿಕಿಸಿ ಭುವನಸಂಸ್ಥಿತಿಯನು ತಿರಗೊಳಿಸಲಿಕೆ। ಕರಸಂಪುಟದಲಿ ಗ್ರಹಿಸುತದನನು ಗಲದೊಳ ॥ ಗಿರಿಸಿ ಲೋಕಾನೀಕಮಂ ಪೊರೆದ ಶಿವನಿರ್ಕೆ ಮನದೊಳಿನ್ನಯ ಸಂತತ ।॥ ೧ ॥

ಪಂಚಾಕ್ಷರಮಂತ್ರನಿರೂಪಣಂ.

ಮುಗ್ಧಶಿಷ್ಯಸಮೂಹಶೇಖರನೆ ಸುವಿದಗ್ಧ । ಸಿದ್ಧಲಿಂಗನೆ ಕೇಳು ಪರಮಪಂಚಾಕ್ಷರ ಸು ॥ ಸಿದ್ಧಮಂತ್ರದಿರವಂ ವಿವರಿಸುವೆ ನಾಲಿಸುವವರು ಸುಕೃತಶಾಲಿಗಳಲ ।॥ ಬುದ್ಧನೆ ಬಹುಲಸಂಕಟಸಮೃದ್ಧಿಯಿಂದಲತಿ । ವೃದ್ಧಿಹೊಂದುತಿಹ ದುಸ್ಸಂಸಾರಶರಧಿಯಿಂ ॥ ದುದ್ಧರಿಪುದಕುಪಾಸಕರನು ಪಂಚಾಕ್ಷರ ಸುವಿದ್ಯೆ ನೌಕೆಯೆನಿಸಿಹುದು ।॥ ೨ ॥

ನಿಗಮಾಗಮಗಳಲ್ಲುಸಿರಿದ ಶಿವಷಡ್ವರ್ಣ । ಸುಗಮ
ವಿಹದೊಳು ಪಂಚಾಕ್ಷರವಿದುವೆಂ ॥ ದು ಗಣಿಸಲ್ಪಡುವದಿದು
ಮಂತ್ರಗಳಲುತ್ತರವಿಹುದರಿಂದ ಮನದಿ ॥ ಬಗೆಯೆ ಪ್ರಣವ
ಯುತ ಷಡಕ್ಷರವನ್ನು । ಜಗದಿ ಭಕ್ತಿಭರಭರಿತನೆನಿಸಿ ಭಜಿಸುವ
॥ ನಿಗೆ ಬೇಗನಿಗಲಚ್ಚ್ಟಣದಲೆಯ ದಯದಲಿ ಸಿದ್ಧಿಯದು ಕ್ಕೆ
ಡುವದಲ ॥ ೩ ॥

ಐದಕ್ಕರಗಳುಳ್ಳ ಮಂತ್ರವಲ್ಪವೆನಿಸುವ । ದಾದರಿದು ವ
ಜದ ತೆರದಂತತಿ ವಿಶಾ ॥ ಲಾದ ಸ್ಫುಟತರವಾದರ್ಥಬೋಧಕವ
ದು ಸುಖಮಯ ಶೃತಿಸಾರವು ॥ ವೇದವಿದನಾತ್ಮಸಿದ್ಧಿಯ ಬ
ಸುವ ಬುಧವರ । ಸಾಧನರನೀಮಂತ್ರವನು ಮನದೊಳರ್ಥ
ಸು ॥ ಬೋಧವಾಗುವ ತೆರದಿ ಸುಖಮುಖೋಚ್ಚಾರವಾಗುವ
ಜಪಿಸುವದಿಹವಿ ॥ ೪ ॥

ಗಣನಕ್ಕಿಳಿಯದ ಮಹಿಮಮಹಿತನು ಸತ್ಯಾದಿ । ಗುಣ
ತನು ಜಗದನುಗ್ರಹಕನೆನಿಸಿದ ॥ ಹಣೆಗಣ್ಣಿನ ಶಿವನೋಂಕಾ
ವೆಂಬೊಂದಕ್ಷರಮನುವಿನ ವಾಚ್ಯನಹನು ॥ ಪ್ರಣುತರಾದೀಶಾ
ಮುಖ್ಯ ಪಂಚಬ್ರಹ್ಮ । ರಣಿಯರು " ನಮಃಶಿವಾ " ಯ
ಮಂತ್ರದೊಳುಮಿಗೆ ॥ ಗಣನೆಯನನುಸರಿಸಿ ನೆಲಸಿಹರಿದರರ್ಥ
ಶಬ್ದವು ಶಿವನಿಹನು ಗಡ ॥ ೫ ॥

ಶಿವನು ಪ್ರಮೇಯನಿರುವದರಿಂದ ವಾಚ್ಯನಹ । ತನೆಮಂತ್ರ
ದು ವಾಚಕವಿರುತಿಹುದಾ ಮಂತ್ರ ॥ ಶಿವರುಭಯರಲಿ ವಾಚ್ಯ
ಚಕತನವಿದನಾದಿ ಸಮಯದಿವಿರುವದುಗಡ ॥ ಶಿವನನ್ನೆ
" ಋತಂಸತ್ಯ " ವೆಂಬ ವರನಿಗ । ಮವದು ಪರಬ್ರಹ್ಮವೆಂದ
ರಿಂದ ಬ್ರಹ್ಮತನ ॥ ಶಿವಶಬ್ದದೊಳು ಮುಖ್ಯವೃತ್ತಿಯಿಂದ
ದಲಿ ಗೌಣವೃತ್ತಿಯಲಿರುವದು ॥ ೬ ॥

ಆದಕಾರಣದಿಂದಲಿಂದುಶೇಖರ ಕೃಪಾ । ಮೇದುರನಹ ಹರನ ಶಿವನೆನಿಪಭಿಧಾನವದು ॥ ವೇದಂಗಳೊಳು ಶಾಸ್ತ್ರಗಳೊಳತಿ ಪ್ರಥಿತವಿಹುದಾನಾಮದಾಶ್ರಯದಲಿ ।॥ ಮೇದಿನಿಯೊಳೀಮಂತ್ರ ವಂ ಪಂಚವರ್ಣಾವೆಂ । ದಾದಿಯಿಂದುಸುರುವರು ವಿಬುಧರದಕೆ ಶಿವನೊಳ ॥ "ಭೇದವೃತ್ತಿಯನು ಪೊಂದಲಪೇಕ್ಷಿಸ ಸುಕೃತಿಗಳಿಂ ಸದಾ ಜಪ್ಯವಿಹುದು" ।॥ ೭ ।॥

ಪೃಥಿವಿ ಮೊದಲಾದ ಭೂತಗಳು ತನ್ಮಾತ್ರಗಳು । ವಿತತ ಕರ್ಮೇಂದ್ರಿಯ ಜ್ಞಾನೇಂದ್ರಿಯಂಗಳು ॥ ಪ್ರಥಿತ ಸದ್ಯಾದಿ ಪಂಚಕವು ಕಾರಣಸಹಿತ ಪಂಚಕೃತ್ಯಂಗಳು ನೆರೆ ।॥ ಸತತವೀ ಮಂತ್ರದೊಂದೊಂದಕ್ಕರದೊಳಿಹವು । ಮತಿವಂತನೆ ಕ್ರಮವಿಡಿ ದುಮತ್ತೆ ಘೋರ ಸಂ ॥ ಸೃತಿಯು ಹೇಗೋಹಾಗೆ ಈಮಂತ್ರ ಬಹ್ವಸಾದಿಯಿರುತಿದ್ದುದನುಭವಿಪುದು ।॥ ೮ ।॥

ಅರಳಿಯನು ಮರಗೂಳನತ್ಯನೀತಿಯು ಶಿರಿಯ । ನಿರದೆ ನಾಶ ಗೊಳಿಸುವಪರಿ ಶಿವನುಪಾಸಕರ ॥ ಭರದಿ ಸಂಸೃತಿ ಸಕಲದುಃಖವ ನು ದೂರೀಕರಿಸಿ ನಿತ್ಯಸುಖವೀವುದು ।॥ ಧರೆಯೊಳಗೆ ತೋರ್ಪಖಿಲ ಮಂತ್ರಗಳ ರಾಶಿಯೊಳ । "ಗುರುಶಿವಷಡಕ್ಷರ ಮಹಾಮಂತ್ರವು ಶರದಿ ಶಿ ॥ ಶಿರಕಿರಣನಂತೆ ನಕ್ಷತ್ರಯೂಥದೊಳು ಪ್ರಧಾನತಮವಾ ಗಿರ್ಪುದು" ।॥ ೯ ।॥

ಅಸದೃಶವೆನಿಸುತಿರುವ ಮಂತ್ರವಾವ ಮನುಜನ । ಬಸಿರೊ ಳೊಸೆದು ವಿರಾಜಿಸುವದೊ ನೇಸರನೊಲಾ ॥ ಗಸದೊಳವನಿಗೆ ಬೇರೆ ಕೋಟಿಮಂತ್ರಂಗಳಿಂದೇನು ಪ್ರಯೋಜನವಿದೆ ।॥ ವಸುಧೆಯೊಳ ಗವನಿಂದ ಕಲಿಯಲಾಯಿತು ವಿದ್ಯೆ । ಯುಸುರಲೇನರ್ಥಗಳಖಿಲ ಗಳವನಿಂದ ಸಾ॥ ಧಿಸಲಾದವಾವನು ಬಕುತಿಯಲೀಮಂತ್ರವಭ್ಯಾಸ ದಿಂ ದೃಢಗೊಳಿಪನೊ ।॥ ೧೦ ।॥

ಆವನ ರಸನೆಯು ಪಂಚಾಕ್ಷರೀಪರಮವಿ । ದ್ಯಾವಿಲಾಸಿನಿ ನರ್ತನಶಾಲೆಯಿಹುದೊ ಮ ॥ ತ್ತಾವನಹೃದಯವು ತದ್ದೇವತಾ ವರಸಿಂಹಪೀಠವಾಗುತೆ ರಂಜಿಪು ॥ ದಾವನ ಮನವು ತನ್ಮಯ ಮಂಪೊಂದಿತರ । ಭಾವವನರಿಯದಾ ಪುರುಷಸತ್ತಮನ ಹುಟ್ಟು ಪಾವಕದಿ "ಸುಟ್ಟಬೀಜವೆನಿಪುದವನು ತಿರಿಗಿಬಾರದ ಪದವನೇ ॥ ೧೧ ॥

ಪಂಡಿತನಿರಲಿ ಪಾಮರನಿರಲಿ ದ್ವಿಜನಿರಲಿ । ಚಂಡಾಲನಿ ಪಂಚಾಕ್ಷರವನು ಸಲೆ ಭೂ ॥ ಮಂಡಲದೊಳಚ್ಛಿನ್ನವಾಗಿ ಜಪಿ ವನು ಭವದಂಡಲಿಯ ಪರಿಹರಿಪನು ॥ ಪುಂಡರೀಕಾಂಬಕನೆ ಮ ನವೆಸಗಿ ಪೂರ್ವ । ತುಂಡನಥವೋತ್ತರ ವದನನಾಗಿ ಆಸನದಿ ಮಂಡಿಸಿ ಸತೋಯಭಸಿತವನು ಧರಿಸುತೆ ಬೀಜಶಕ್ತ್ಯಾದಿಯ ನೆನೆದು ॥ ೧೨ ॥

ಜಪಿಸುವದು ದಂಡಭಂಗಿನ್ಯಾಯದಲಲಸತೆ । ಯಿಸ್ಪದ ಮನಃಪ್ರಸನ್ನತೆಯಲಿ ನರನಾ ॥ ಜಪವು ವಾಚಕುಪಾಂಶುಕ ಪ ನಸವೆನಿಸುತೆ ಮೂರುತೆರನಿರುವದದರೊ ॥ ಳೊಪ್ಪುತ್ತಿರುವುದು ನೀಚಸ್ವರಿತಗಳನು । ಸುಪದವರ್ಣಗಳನುಚ್ಚರಿಸುವದು ವಾಚ ವು ॥ ಜಪವು, ಪಲ್ಲುತುಟಿ ಮಿಡಿಕಿಸುತನ್ಯಜನ ಕೇಳದಂತುಚ್ಚರಿ ದುಪಾಂಶು ॥ ೧೩ ॥

ಚಿತ್ತದಿಂ ಮಂತ್ರವರ್ಣಗಳನುಚ್ಚರಿಸುತ್ತೆ । ಮತ್ತರ್ಥ ಮನುಸಂಧಾನಿಸುತೆ ಮಾನಸವ ॥ ದುತ್ತಮನೆ ಯೊಂದುಗುಣ ಳ್ಳ ವಾಚಕದಿಂ ಶತಗುಣವದುಪಾಂಶುವದರ ॥ ಕಿಂತ ಸಾಸಿ ಣದ ಮಾನಸಜಪವಧಿಕ ತ । ವೋಕ್ತ ಜಪಗಳಲೊಂದನು ಕ್ರ ದಲಿ ಸಲೆ ವಿ ॥ ಧ್ಯುಕ್ತವಾಗಿ ಜಪಿಸುವ ಮಾನವನು ಮಾಯೆಯ ಪಾಶದಿಂ ಮುಕ್ತನಹನು ॥ ೧೪ ॥

ಸಾಧಕನು ಮಂಡೆಗೂದಲ ಬಿಟ್ಟೇಕವಚಮಂ । ನೋದದಿಂ ತೊಟ್ಟು ವೇಷ್ಟನವ ಶಿರದಿಟ್ಟು ಸುವಿ ॥ ನೋದಿಸುತೆ ನಗುತೆ ನಗ್ನ ನೆನಿಸಿ ಕುಡಿಯುತ ತಿನ್ನುತ ತಿರಗುತಲಿ ನಿಲ್ಲುತ ॥ ವಾದವಾಡುತೆ ಮಾತನಾಡುತೆ ಮಲಗುತೆ ನಿಜ । ಪಾದಗಳ ಚಾಚುತಂ ಕುಕ್ಕುಟಾ ಸನದಿದ್ದು ॥ ಹಾದಿಯೊಳಗಪವಿತ್ರವಾಹನವನೇರಿ ಮಂತ್ರವ ಜಪಿ ಸಲಾಗದಿಹದಿ ॥ ೧೫ ॥

ಶಕ್ತ ಸಹ ಮಾನವನು ದಿನದಿನದಿ ಶಾಸ್ತ್ರದೊಳ । ಗುಕ್ತವಾದ ಷ್ಟು ಮಂತ್ರವನಶಕ್ತನೆನಿಸಿರೆ ॥ ಶಕ್ತಿಯಿದ್ದಷ್ಟು ಬಿಡದಲೆ ಸದಾಚಾ ರವ ಜಪಿಪುದು ಕಲ್ಯಾಣಕಾಂಕ್ಷಿ ॥ ಭಕ್ತ್ಯವಚ್ಛಿನ್ನಮಾನಸನಹ ಮನುಜನು ಭವ । ಮುಕ್ತ್ಯರ್ಥವಾಗಿ ಶೈವಸುಮಂತ್ರದಿಂದುರು ॥ ವ್ಯಕ್ತಭಾವದಿನುಪಚರಿಸುತೆ ಶಿವಲಿಂಗವಂ ಪೂಜಿಪುದು ಪುಂಸತ್ತ ಮ ॥ ೧೬ ॥

ಭೂವಲಯದೊಳಿಹ ನಾನಾಯಾಗಗಳು ಜಗದಿ । ಭಾವಿಸಲು ಯೋಗಗಳನುಷ್ಠಾನುಗಳು ತಪಗ ॥ ಆವವು ಸರಿಯೆನಿಸವು ಶೈವ ವಿದ್ಯೆಯ ಶತಾಂಶಕೆ ಕದಾಪಿ ಗುಣಿಮುಕುರ ॥ ಭಾವದಿಂ ಪರಿಶು ದ್ಧನಾಗಿರಲಿರದಿರಲವ । ನಾವನೇಯಾಗಿರಲಿ ಭಾವಜನಿವೈರಿಶಿವ ॥ ದೇವನನ್ನೋಡುಸಲ ಪಂಚಾಕ್ಷರದಿ ಪೂಜಿಸಲು ಬಂಧನವು ಬಿಡುವ ದು ॥ ೧೭ ॥

ಪೂರ್ವದೊಳು ಸಾನಂದನೆಂಬ ಯೋಗೀಶ್ವರನು । ಶರ್ವನು ರುತರಭಕ್ತಿಭರಭರಿತನೊಂದುದಿನ ॥ ಸರ್ವನಾರಕಿಗಳನಿದೇಮಂತ್ರ ದೊಲವಿನಿಂ ನಿರಯದಿಂದುದ್ಧರಿಸಿದ ॥ ದರ್ವೀಕರಾಭರಣಭಕ್ತನು ಶತಾನಂದ । ಪೂರ್ವಪಾಪಕೆ ನಿರಯದೊಳು ದುಃಖದಿಂದಲಿ ॥ ದೋರ್ವಶಿಷ್ಯನಿಗಾಗಿದೇ ಮಂತ್ರದಿಂ ನರಕಮಂ ನಾಕಮಂ ಮಾ ಡಿದ ॥ ೧೮ ॥

ಶೈವರೊಳು ಶತಮನ್ಯು ವೆನಿಸುವಾವುಪಮನ್ಯು । ವಾವ್ಯ
ಯನು ಮೀರಿರುವ ಮಹಾಮಂತ್ರ ಪ್ರ ॥ ಭಾವದಿಂ ಪೊಂದಿದ
ವಶಾಸ್ತ್ರಾಚಾರ್ಯತನವ ಶಿವನ ಕೃಪೆಯಿಂದ ॥। ಭಾವುಕ ಭೃಗು
ದುರ್ವಾಸ ವರವಾಮ । ದೇವ ಮೊದಲಾದ ಮುನಿಮುಖ್ಯರಿ
ತ್ರಾನು ॥ ಭಾವದಿಂ ಸ್ವೇಷ್ಟಸಂಸಿದ್ಧಿಯನನುಭವಿಸಿ ವಿದೇಹ
ರೆನಿಸಿದರು ॥। ೧೯ ॥।

ವಿಭೂತಿ ತತ್ತ್ವನಿರೂಪಣಂ

ಸಿದ್ಧಲಿಂಗಶಿವಾರ್ಚಕನೆ ಸಾವಧಾನದಿಂ । ಬದ್ಧಚಿತ್ತ
ಲಿಸು ಬಿಡದೆ ಶಿವಮಂತ್ರ ॥ ಸಿದ್ಧವಾದ ಭವಹರ ಭಸಿತದ
ಮೆಯನೊಲೆದುಸುರುವೆನು ನಿನಗೆ ಮಗುವೆ ॥। ಬುದ್ಧನೆ "ನಭ
ಪ್ರಮುದಿತವ್ಯಮಿತಿ" ಸುಪ್ರ । ಸಿದ್ಧತೈತ್ತಿರಿಯ ಶೃತಿಯಿರುತಿ
ದರಿಂದ ॥ ಲಿದ್ದ ದೋಷವ ಕಳೆದು ತನ್ನುದ್ಧರಣವನಿಚ್ಛಿಸುವ
ಧರಿಪುದಿದನು ॥। ೨೦ ॥।

ಭೂತಿಧಾರಣಯುಕ್ತ ಭೂಸುರವರನುರುಭವ । ಭೂತಿಪ
ನಾಗಿ ದಶಪೂರ್ವದವರನು ದ ॥ ಶೋತ್ತರ ಘನಪುರುಷರನೇ
ಕಶಿಪಂಕ್ತಿಗಳನು ಪಾವನವ ಮಾಡಿ ॥। ಸಾತಿಶಯಸಾಯುಜ್ಯ
ನೈದುವನೆಂದು । ಪೂತನಹ ಬೋಧಾಯನ ಮುನಿಯುಸು
ನು ವಿ ॥ ಖ್ಯಾತಜಾಬಾಲಾದ್ಯುಪನಿಷದಗಳಲಿ ಮುನಿಗಳುಲಿವ
ಘನತೆಯನು ॥। ೨೧ ॥।

ಸಿರಿಯತವರೆನಿಪ ಭಸಿತವ ಧರಿಸುವದನು ತಾ । ಮರೆದು
ಮಾದಕೊಳಗಾಗಬಾರದೆನುತುರೆ ॥ ಪರಿಪರಿಯುಸುರುವವು ಶ
ಳುಂ ಶಾಸ್ತ್ರಗಳು ಭುವನದೊಳು ಭದ್ರಗುಣನೆ ॥। ಪರಮಾರ್ಥ
ರಿಯೆ ನಿಖಿಲ ವರ್ಣಾಶ್ರಮಿಗ । ಳಿರದಲೆ ವಿಭೂತಿಯಿಂದುದ್ಧ
ಪುಂಡ್ರಗಳ ॥ ನರಿದು ಧರಿಸುವದು ವರಕಲ್ಯಾಣಕರವೆಂದು
ರಾಚಾರ್ಯವರರು ॥। ೨೨ ॥।

ಸಾಧಕನೆ ಭಸ್ಮದುದ್ಧೂಲ ತ್ರಿಪುಂಡ್ರಗಳು । ಸಾಧನವು ಮುಕುತಿಗೆ ಜ್ಞಾನಾಂಗತನದಿಂದ ॥ ಬೋಧಿಸುವರವರಥರ್ವಶಿರಃಶೃತಿಸ್ಥ ವಿದ್ಯಾಖ್ಯಾತ ಮುನಿಮುಖ್ಯರು ।॥ ಬೋಧ್ಯವು ಬುಕುತಿಯು ಮುಕುತಿಯು ವಿರಕ್ತಿಯುರೆ ನಿ । ರ್ವೇದನಾಶವು ಯಶೋವೈಶದ್ಯವಾಗುತಿಹು ॥ ದಾದ್ಶರಿಂದಾಮ್ನಾಯಸಿದ್ಧ ವಿತರಾನಿಷಿದ್ಧವಹ ಭಸಿತವ ಧರಿಪುದು ॥ ೨೩ ॥

ತಿಳಿದು ತಿಳಿಯದಲೆ ಮಾನವನಾವನು ಮನದಿಂ । ದೆಳಸಿ ವರಭಸಿತದಿಂದುದ್ಧೂಲನವನು ಗೈ ॥ ದಳಿಕದೋಳ್ಪುಂಡ್ರವ ಧರಿಸುವನವನ ಕಲುಷವ ಸುಡುವದಗ್ನಿಯರಳಿನೊಲು ।॥ ತಿಳಿಯೆ ಸಕಲಕ್ರಿಯೆಗಳಲಿ ಭಕ್ತಿಯಿಂ ಭಸ್ಮ । ಬಳಸದಿರುವ ಮನುಜನು ಮಾಡುವ ಜಪತಪವು ನಿ ॥ ಟಲನೇತ್ರಪೂಜೆ ಮೊದಲಾಗಿಹವು ಬೂದಿಯೊಳು ಹವನದೊಲನರ್ಥವು ಕಣ ॥ ೨೪ ॥

ಭೂತಿ, ಭಸ್ಮ, ಭಸಿತ, ಕ್ಷಾರ, ರಕ್ಷೆಯೆನುತೆ ವಿ । ಭೂತಿಯಭಿಧಾನಗಳಿಹವು ಸಕಾರಣವಾಗಿ ॥ ಭೂತಿದಾಯಕವದು ವಿಭೂತಿ ಭಸ್ಮವು ಪಾಪನಾಶಕವು ಭಸಿತವು ಪ್ರ ।॥ ಭೂತತತ್ತ್ವ ಪ್ರಭಾಸಕವದು, ಕ್ಷಾರವುರೆ । ಭೂತಭಾವಿಭವದ್ವಿಪತ್‌ಕ್ಷಯಕರವು, ರಕ್ಷೆ ॥ ಭೂತಂಗಳಿಂ ರಕ್ಷಿಪುದದರಿಂದನ್ವರ್ಥಗಳಿಹನ್ವೈದು ಪೆಸರುಗಳು ।॥ ೨೫ ।॥

ಕಲ್ಪವನುಕಲ್ಪವುಪಕಲ್ಪ ಮತ್ತದಕಲ್ಪ । ವಲ್ಪವಲ್ಲದ ಭಸ್ಮದಜನಿ ನಾಲ್ಕುಪರಿಯಲಿ ॥ ಕಲ್ಪಿಸುತಿಹರು ಪಂಡಿತಾಖಂಡಲರವುಗಳಲಾದಿಯು ಯಥಾಶಾಸ್ತ್ರವು ।॥ ಕಲ್ಪಿಸಿದ ಹೋಮಾಗ್ನಿಯಲ್ಲಿ ಸಂಸ್ಕೃತವದುವೆ । ಕಲ್ಪವು, ಕರಂ ಸುಟ್ಟಡವಿ ಕುರುಳು ಬೂದಿಯನು ॥ ಕಲ್ಪಾಪಣದ ಸಂಸ್ಕೃತ ಭಸಿತವದುಪಕಲ್ಪವುಳಿದುದೆಲ್ಲವಕಲ್ಪವು ।॥ ೨೬ ।॥

ಮಾನವನದನು ದೊರೆಕಿಸಲು ಸಮರ್ಥನಿರುತಿರೆ । ಸಾ
ಗದಿ ಕಲ್ಪವನೆ ಬಳಿಸುವದೊಳಿತವು ॥ ಜ್ಞಾನಶಕ್ತಿನಿರಲು
ಮೂರರೊಳಗೊಂದನುಪಯೋಗಿಸುವದುಮುದದಿ ॥ ಭಾನು
ಯದೊಳಿದ್ದು ಮನದಿಂದ ಶಿವನಂ । ಧ್ಯಾನಿಸುತೆ ಮಜ್ಜ
ಗೆಯ್ವಾಸನದಿ ಕುಳಿತು ॥ ಮೌನದಿಂದೆಡಗೈಯೊಳಿಟ್ಟು ಭ
ಬಲಗೈಯಿಂದ ಮುಚ್ಚೆಂಟುಸಾರೆ ॥ ೨೭ ॥

ಮೂಲದಿಂದಭಿಮಂತ್ರಿಸೀಶಾನಮಂತ್ರದಿಂ । ದಾಲಸ್ಯ
ಶಿರವನುರೆ ಭುವಿಯನುಪಮ ॥ ಶೀಲನೆ ಪುರುಷದಿಂ ಮು
ಘೋರದಿ ಹೃದಯವನು ವಾಮದಿಂ ಗುಹ್ಯವ ॥ ಮೇಲೆ ಸ
ಸುಪಾದಗಳ ಸರ್ವಾಂಗವನು । ಮೂಲದಿಂ ಸಿಂಚಿಸುವದಿದು ವಿ
ತಿಸ್ನಾನ ॥ ಪಾಲಿಸುವದಿದನಂ ನಿಖಿಲಮಲಾಪಹರವಾದಾಗ್ನೇ
ಮಜ್ಜನವಿದು ॥ ೨೮ ॥

ವಾರಣವೆ ಮೊದಲಾಗಿಹಾತ್ಮ ಬಾಹ್ಯಮಲಾಪ । ಹಾ
ಳಾದಿತರ ಜಳಕಗಳಕಿಂತಲತಿ ॥ ಸಾರಪಾವಿತ್ರ್ಯಯುತವು ಜ್ಞಾ
ಧಾನದಿಂ ಮುಕ್ತಿಮೂಲವೆನಿಸುತಿಹ ॥ ಕಾರಣದ ಬಲದಿಂದ ಯ
ಗಳು ಪರಮಶೈವ । ವೀರಶೈವರು ವಿಭೂತಿಸ್ನಾನವನು ಜಗದಿ
ಮೂರುಕಾಲಗಳೊಳಥವೇಷ್ಟಕಾಲದೊಳು ಮಾಡುತೆ ಮುಕ್ತಿಯ
ಪಡೆವರು ॥ ೨೯ ॥

ಇಂದ್ರವಿಧಿಯು ಮುಕುಂದಮೊದಲಾದ ಬೃಂದಾರ । ಕೇ
ದ್ರರು ಸುರಮುನಿನಾರದಮುಖ್ಯರು ಮನುಗಳ ॥ ಮುಂದ ಸಾನ
ದಿ ಋಷಿವರರು ಬಾಣಮುಖದೈತ್ಯರು ಭಜಕಪುಂಗವ ॥ ಶ
ದಿಂದ ಯಥಾವಿಧಿವಿಹಿತ ಭಸಿತದ ಧೃತಿ । ಯಿಂದ ದೋಷದ
ಯನುಳಿದು ರವಿಯೊಲು ಬೆಳ ॥ ಗಿಂದಕಡು ಹೊಳೆದರುದಿವಿ ಭ
ಯೊಳು ಭವರಹಿತ ಭಕ್ತಿಮಂಡಿತನೆ ಕೇಳು ॥ ೩೦ ॥

ನಿಳುಸಲ ನಾಮಮಂತ್ರದಿ ಮಂತ್ರಿತ ಭಸಿತೋ । ದ್ಧೂಲ ಪೂರ್ವಕ ಸುತ್ರಿಪುಂಡ್ರಮಂ ಧರಿಪುದು ॥ ದ್ಧೂಲನದಕಿಂತ ಸಜಲ ಭಸಿತದೊಳೆಸೆವ ತ್ರಿಪುಂಡ್ರ ವುತ್ತಮವು ಮಗುವೆ ।॥ ಬಾಲಕನೆ ಆ ನಿಮಿತ್ತೋ್ತದ್ಧೂಲನಿಲ್ಲದುರು । ಭಾಲಮೊದಲಾದುಕ್ತ ಪನ್ನೈದು ಜಾಂಗಂಗ ॥ ಲೋಳನುದಿನ ಸಜಲಭಸಿತದಿಂ ತ್ರಿಪುಂಡ್ರಮಂ ಧರಿಪುದು ಫಲಾಕಾಂಕ್ಷಿಯು ।॥ ೩೧ ।॥

ಸಾರತರ್ಜನಿ ಮಧ್ಯಮಾನಾಮಿಕೆ ಯೆನಿಸುವ । ಮೂರು ಬಲಗೈ ಬೆರಳುಗಳಲಿ ತ್ರಿಯಂಬಕೋ ॥ ದಾರಮಂತ್ರದೊಳಿಲ್ಲವುರು ಮಧ್ಯಮಾನಾಮಿಕಾಂಗುಷ್ಠಗಳೆನಿಸುತಿಹ ।॥ ಮೂರಂಗುಳಿಗಳಿಂದ ಲನುಲೋಮ ಸುವಿಲೋಮ । ದಿಂ ರಾಜಿಪ ಜಲಾದ್ರ್ರಧವಲ ದಂತುರ ಮತ್ತೆ ॥ ಸಾರಲ್ಯಭರಿತ ತಿರ್ಯಕ್ತ್ರಿಪುಂಡ್ರವನು ಕರ್ಣಾಂತ ಭಸಿತದಿ ಧರಿಪುದು ।॥ ೩೨ ।॥

ದಿನದಾದಿಯೊಳು ಮಧ್ಯದೊಳವಸಾನದೊಳು ದಿನ । ದಿನ ದಯೂಮಯನಾಗಿ ಯುದ್ಧೂಲಪೂರ್ವಕಂ ॥ ವಿನುತ ತಿರ್ಯಕ್ತ್ರಿಪುಂಡ್ರವ ಧರಿಸಿ ನಿತ್ಯನೈಮಿತ್ತಿಕ ಕ್ರಿಯೆಯ ಮಾಡು ।॥ ವನು ಮುಕ್ತಿಲಕ್ಷ್ಮೀಮನೋರಮಣನೆನಿಸುವ ನಿ । ದನತಿವಿಶ್ವಾಸದಿಂದಾಚರಿಸದ ನರಗೆ ॥ ಳ್ಳನಿತಾದರು ಸುಖವಿರದೆ ಭವಭವದಿ ತಿರುಗುವಿಕೆಯು ಬಪ್ಪುದದು ತಪ್ಪದು ।॥ ೩೩ ।॥

ಶ್ರೀಶೈಲವೊದಲಾದ ಸರ್ವಸುಕ್ಷೇತ್ರಗಳ । ಲೇಸೆನಿಪ ಯಾತ್ರೆಯೊಳಗಾವ ಸುಕೃತವಿರುವದು ॥ ಭಾಸುರ ಸುಮಣಿಕರ್ಣಿಕಾದಿತೀರ್ಥಗಳಲಿ ಮಿನಿವದರಿಂಪಾವಫಲವು ।॥ ದೇಶಿಕನೆ ಎಲ್ಲವುಗಳ ಫಲಗಳ ರಾಶಿಯ । ನ್ನೀಶಾರ್ಚಕನು ಪೊಂದುವನು ಭಸಿತ ಮಜ್ಜನ ॥ ಕ್ಲೇಶಜನಕೋರುಪಾಪೋಪ ಪಾಪಗಳನಿದು ಸುಡುವದನಲವು ತೃಣವೊಲು ।॥ ೩೪ ।॥

ಸ್ವಾಮಿಯೆ ಸುಚಿದ್ಭೂಮಿಯೆ ತವೆ ನೀನುಸುರಿದುರು । ಧಾ
ಮನಿಧಿಯಹ ಭಸಿತಧಾರಣ ಮಹಿಮೆಗಳಂ ॥ ಪ್ರೇಮದಿಂದಾ
ಕೃತಾರ್ಥನಹೆ ಮುಂದೆ ರುದ್ರಾಕ್ಷಗಳ ಧಾರಣದ ಮ ॥ ಹಾಮ
ಮೆಯನುಪದೇಶಿಸಿ ಮರೆಯದುದ್ಧರಿಪು । ದೀಮಗುವನೆಂದು ಕ್ರೌ
ರ್ಯದಿಂ ವಿಜ್ಞಾಪಿ ॥ ಪಾಮನಸ್ವಿಗೆ ಮೌನಿಮಾತಂಗನಾದ ಗು
ವರನುಸುರಲನುವಾದನು ॥ ೩೫ ॥

ರುದ್ರಾಕ್ಷ ತತ್ತ್ವನಿರೂಪಣಂ.

ಸ್ತುತ್ಯಲಿಂಗಾರ್ಚನೆಯಲಾಸಕ್ತಿಯುಕ್ತ ಸ । ದ್ಭಕ್ತಿಯಿಂ ಭ
ದುದ್ಧೂಲದ ಬಳಿಕಳಿಕದಿ ॥ ಬಿತ್ತರಿಸಿಗೆಯ್ದು ತಿರ್ಯಕ್ತ್ರಿಪುಂಡ್ರವ
ಳ್ವವನು ಶಿವಾಕ್ಷಂಗಳನ್ನು ॥ ನಿತ್ಯದೊಳು ಧರಿಸುವದು ಕರಉ
ಚಿತವು ಜಗದೊಳ । ಸತ್ಯಮಾರ್ಗದಿರುತಿದ್ದರು ಹರಾಕ್ಷಗಳನ್ನು
ಮತ್ತರ್ತಿಯಿಂದ ಧರಿಸುತಿರಲಾಮರ್ತ್ಯನು ಕೃತಕಲುಷ ವಿಮು
ನಹನು ॥ ೩೬ ॥

ಪೂರ್ವದೊಳು ಯಂತ್ರಚಕ್ರದ ತೆರ ತಿರುಗುತಿರುವ । ಖ
ನಗರತ್ರಯವ ಲಕ್ಷಿಸಲು ಚಿರದೆರೆದ ॥ ಶರ್ವನ ನಯನಗಳಿ
ದುರಿದಶ್ರುಕಣಗಳು ರುದ್ರಾಕ್ಷಗಳೆನಿಸಿದವು ॥ ಉರ್ವಿಯೊಳಗ
ಬಲಗಣ್ಣಿಂದ ಪನ್ನೆರಡ । ಪೂರ್ವಪಿಂಗಲಗಳೆಡಗಂಣಿನಿಂ ಷೋ
ಶವು ॥ ದುರ್ವರ್ಣವರ್ಣದವು ಪಣೆಗಂಣಿನಿಂ ಪತ್ತು ಕಬ್ಬಂ
ವೆನಿಸಿದವು ॥ ೩೭ ॥

ದ್ವಿಜರು ಬಿಳಿಬಂಣದ ಸುಬಾಹುಜರು ಕೆಂಬಾಣ । ದ
ದೊಳು ವೈಶ್ಯರು ಹಳದಿಬಂಣದ ನೆರೆ ಪಾ ॥ ದಜರು ಕಬ್ಬಂ
ಶಿವಾಕ್ಷಗಳನು ಬಿಡದೆ ಧರಿಪುದು ವಿಧಿಯನನುಸರಿಸಿ ॥ ಭಜಿ
ದು ದುಂಡ, ಮುಳ್ಳುಳ್ಳ, ದೊಡ್ಡ, ದೃಢ, ಶುಭ, । ವಿಜ
ಹೊಂಬಾಣದ, ವ್ರಣ, ಶಿವಾಕ್ಷಗಳನು ॥ ತ್ಯಜಿಸುವದಿವುಗಳ
ವಿಪರೀತವೆನಿಸಿದವುಗಳನು ಶಿವಭಜಕರಿಹ ॥ ೩೮ ॥

ಪುಟ್ಟಿತ್ತ ತೂತುಳ್ಳ ರುದ್ರಾಕ್ಷವನು ಗುಣಗ । ರಿಷ್ಠರು ಧರಿಸುವದತ್ಯುತ್ತಮವು ಭುವನದೊಳು ॥ ಪುಟ್ಟಿ ಪುರುಷಕೃತರಂಧ್ರದಡು ಮಧ್ಯಮವೆಂದೆಣಿಸುವರು ವಿಶೇಷಜ್ಞರು ।।। ಶ್ರೇಷ್ಠವೆಂದೆನಿಪ್ಪೊಂದುಮುಖದೊಂದು ಶಿಖೆಯೊಳಗೆ । ನೆಟ್ಟಗೆ ಶಿರದಿ ಮೂರು ಮತ್ತೆ ಮುವ್ವತ್ತಾರು ॥ ತಟ್ಟನೆ ತಲೆಯೊಳೆರಡು ರಟ್ಟೆಗಳಲಿ ಪದಿನಾರು ಪದಿನಾರು, ಗಲದೊಳಗೆ ।।। ೩೯ ।।।

ಎಣಿಕೆಯಿಂ ಮುವ್ವತ್ತೆರಡು ಹಸ್ತಮೂಲಗಳೊ । ಳಣುಗನೆ ಸುಪನ್ನೆರಡು ಪನ್ನೆರಡು, ಕಿವಿಯೊಳಗ ।। ನಣುಗಳಾರಾರು, ಪೆಗಲೊಳರೆ ಸಾಸಿರುಪವೀತದೊಳಷ್ಟಶತ ಭದ್ರಲ ।।। ಕ್ಷಣ ಶಿವಾಕ್ಷಮಣಿಗಳನು ಶಿವಪೂಜೆಯಲಿ ಧಾ । ರಣವ ಮಾಡುವದವುಗಳವಲೋಕನಾರ್ಚಸ್ಮ ।। ರಣಗಳಿಂದ ಸ್ಪರ್ಶಧಾರಣಗಳಿಂದಿರದೆ ಮರ್ತ್ಯನು ವಿಮುಕ್ತನಹನು ।।। ೪೦ ।।।

ಉತ್ತಮನಿರಲಿ ಮಧ್ಯಮನಿರಲಿ ಕನಿಷ್ಠನಿರ । ಲುತ್ತಮಸ್ಪೃಶ್ಯನಿರಲಸ್ಪೃಶ್ಯನಿರಲಿ ತಾ ।। ಮತ್ತಾವನೇಯಿರಲಿ ರುದ್ರಾಕ್ಷಧಾರಣದಿ ಕಡಿಗೆ ಶಿವನಂ ಕೂಡುವ ।।। ಮೃತ್ಯುವಿನಕಾಲದೊಳು ರುದ್ರಾಕ್ಷವನ್ನು ತೇ । ದಿತ್ತನೀರನು ರುದ್ರನಂ ಜಾನಿಸಿಕುಡಿದವ ॥ ನಿತ್ತರಿಗಿ ಬಂದಿಹ ಗಣಪದವಪೊಂದುವನೆನುವದಿದುವೆ ಸಂದೇಹವೆ ।।। ೪೧ ।।।

ಪವಳಮುತ್ತುರು ವಜ್ರವೈಡೂರ್ಯಮಣಿಗಳಿಂ । ಹವಣಿಸಿ ಮಿಸುನಿಯ ಯುಳೆಯಿಂದ ಸಲೆ ಪೋಣಿಸಿದ ।। ಶಿವಶಿವಾಕ್ಷಮಣಿಮಾಲಿಕೆಗಳಥವಾ ಕೇವಲ ಶಿವಾಕ್ಷ ಸರವ ಧರಿಸಿ ।।। ಭವಹರಭಸಿತವನು ಪಣಿಯೊಳು ತ್ರಿಪುಂಡ್ರದಿಂ । ಜವದಿರಿಸಿದ ಶಿವಭಕ್ತನನು ಪಾಪಗಳು ಮು ।। ಟ್ಟವು ಬೇಸಿಗೆಯ ಬಿಸಿಗದಿರನಂ ತವೋರಾಶಿಯಂತವನೆ ಕೃತಕೃತ್ಯನು ।।। ೪೨ ।।।

ರುದ್ರಭಕ್ತಿ ಭರಭರಿತನೆನಿಪ ಮನುಜಗಜನು । ರುದ್ರಾಕ್ಷಗಳನು ತಲೆಯೊಳಗಿಟ್ಟು ಮಜ್ಜನವ ॥ ನದ್ರಿಜಾಧವನ ನೆನೆಸುತ್ತ ಮಾಡೆ ಗಂಗೆಯೊಳು ಮಿಂದ ಫಲವನುಣುವನವ ॥। ಕ್ಷುದ್ರರೋಗಗಳುಪದ್ರವ ನೀಗಿ ತಾ ಸರ್ವ । ಭದ್ರಗಳ ಕಾಣಲಿಚ್ಛಿಸುತಿರುವ ನರವರನು ॥ ರುದ್ರಾಕ್ಷಗಳನು ಮೇಲುದಿತಪ್ರಕಾರ ಸೇವಿಪುದುಚಿತವಹುದು ಜಗದಿ ॥। ೪೩ ॥।

ಮುಂದೆಕೇಳುರು ಸಾದಿಯೆಂಬುವೊಂದೂರೊಳೋ। ವಿಂದುಶೇಖರ ಭಕ್ತೆ ಭವವಿರಕ್ತೆಯು ಮಹಾ ॥ ಸಂದೆಯೆಂಬುವ ನಾರಿವನಿತೆಯು ಮಣಿಯು ಭೂಷಣವನುಳಿದು ವರಶಿವಾಕ್ಷ ॥। ವೃಂದಮಂ ಧರಿಸಿಶಿಖೆಯೊಳುಕೊರಳೊಳು ಹರಾಕ್ಷ। ದಿಂದಂದಗಳಹ ಕುಕ್ಕುಟ ಮರ್ಕಟಂಗಳಿಗೆ ॥ ಸುಂದರ ನಟನವ ಕಲಿಸಿಯವುಗಳೊಡನೆ ಪೂಜೆಯುಲಿರುತೆ ಸುಖವ ಪಡೆದಳು ॥। ೪೪ ॥

ಪಾದೋದಕ ತತ್ತ್ವನಿರೂಪಣಂ

ಪ್ರಥಿತಬೋಧಾಯನ ನಥಾತೋಮಹಾದೇವ । ವಿತತ ಪಾದೋದ ವಿಧಿಯೆಂದು ಶಾಖೆಯೊಳು ತಾ ॥ ನತಿಶಯದಿ ಬಣ್ಣಿಸಿರುವದರಿಂದ ವೈದಿಕವದದರಿಂದಲೇ ಗ್ರಾಹ್ಯವು ॥। ಮತಿಯುತನೆ ದೀಕ್ಷಾಚರಣ ಜಲವು ಶಿಕ್ಷಾಂಘ್ರಿ । ತತತೋಯವು ಜ್ಞಾನಪಾದೋದವೆಂದು ಮೂ ॥ ರುತೆರವಿಷ್ವರವು ಶಬ್ದಗಳಿಂದ ಬೇರೆಯಿಹವೆಂದು ಶ್ರುತಿಮತವು ಕಣ ॥। ೪೫ ॥।

ಶಿವನಮಜ್ಜನಜಲವು ಜನರಿಂ ಜಗದೊಳು ಘನ । ಭವಪಾಶನಾಶಕದು ಪಾನಾರ್ಹವಾಗಿಹುದು ॥ ತವೆಗುರುಚರರ ಪಾದಜಲವು ಶಿರದಿಂದ ಧರಿಪುದೆನುತ ಪ್ರತಿಭಾಸುತೀ ॥। ರ್ಥವ ವೇದವರಿಯುವದರಿಂದಾವುಭಯರವರ । ಶಿವದ ತೀರ್ಥವು ಶಿರೋಧಾರ್ಯವದಪೇಯ ವೆಂ ॥ ಬುವರು ತನ್ನೀಲಕಂಠಾಚಾರ್ಯ ರಚಿತಕ್ರಿಯಾಸಾರವಂ ನೋಡಲಿ ॥। ೪೬ ॥

ಜ್ಞಾನವೈರಾಗ್ಯಗಳ ಸಿದ್ಧ್ಯರ್ಥವಾಗಿ ಬಹು । ಮಾನನೀಯ ನಹ ಗುರುವಿನ ಪಾದಜಲವನಭಿ ॥ ಮಾನಮಾಡದೆ ಕುಡಿಯುವದು ಮತ್ತೆಯಾದರಿಂದ ಕರಣಶುದ್ಧಿಯಹುದು ಕಣ ॥ ಮಾನವನುದರರೋಗದ ನಿವೃತ್ತಿಗೌಷಧವ । ವಮಾನದಿಂ ಕುಡಿಯುವಂತೆ ಬಹು ಕಾಲದ ಭವದ ॥ ಬೇನೆಯನು ನೀಗಲು ಶಿವಗುರುಗಳ ಚರಣ ಜಲವಂ ಭಕ್ತಿಯಿಂ ಪೀರ್ವುದು ॥ ೪೭ ॥

ಕೇಳು ತ್ರಿಪಾದೂರ್ಧ್ವವೆಂಬ ಶ್ರುತಿಸತಿಯು ಕೃ । ಪಾಳುತಮ ಗುರುಲಿಂಗಜಂಗಮರ ಪಾಪವಂ ॥ ಪಾಳುಮಾಡುವ ಪಾದವಾರಿತ್ರಯವನು ಗ್ರಹಿಸುವದೆಂದುಸುರುತಿಹಳು ॥ ಬಾಳನೆ ಭುವನದಿ ಗಂಗೆಯಮುನೆ ಮೊದಲಹ ಕೀ । ಲಾಲನಿಧಿಯಂ ಪೊಂದುವ ನದಿಗಳ ಸಲಿಲಗಳ ॥ ಮೇಲೆನಿಪುಪಾಸನೆ, ನೆನಹು, ಪಾನ, ಧಾರಣಗಳಿಂದಾವ ಪುಣ್ಯವಿಹುದೊ ॥ ೪೮ ॥

ಭವುಕನೇ ಕೇಳೆಲ್ಲವಕ್ಕಿಂತ ಪಾದೋದ । ಕವು ಪುಣ್ಯಕರಮಾದುದರಿಂದಲರ್ಚಕನು ॥ ತವೆ ಧರಿಪುದು ಶಿರದಲಿ, ನೆನಹುದು ಕರಂ ಪಾನಮಾಡುವದು ಬಕುತಿಯಿಂದ ॥ ಲವಧರಿಪುದು ಗುರುವಿನ ಪಾದೊದ ಪಾನಕ । ರ್ಹವು ಶಿರದೊಳಗೆ ಧೃತಿಗೆ ಯೋಗ್ಯವು ವರ ಮನುಜನು ॥ ಭುವನದೊಳಿರುವ ಸರ್ವತೀರ್ಥಗಳ ಫಲಗಳೆಷ್ಟಂಟಷ್ಟು ಪೊಂದುವನಲ ॥ ೪೯ ॥

ಪಾಪಪರ್ವತ ವಿದಾರಣ ಮಹಾದಂಭೋಳಿ । ತಾಪವಿಪಿನದಹ ದಾವೋಪಬರ್ಭುಧವೆನಿಪ ದು ॥ ರಾಪದೋಷದರಾಶಿವಾರಾಶಿವಡವಾಗ್ನಿ ಸಂವಿದುರು ಸದ್ದೀಪಿಕೋ ॥ ದ್ದೀಪನವು, ಜನ್ಮಮರಣಗಳೆಂಬುವ ಘನ ರೋ । ಗೋಪಶಮನಕರೌಷಧವೆನಿಪ ಶ್ರೀಗುರುವಿ ॥ ನಾಪಾತ ಸುಖದ ಪಜ್ಜಲಪಾನಮಾಡುವನು ದಾಟುವ ಭವಾಬ್ಧಿಯನ್ನು ॥ ೫೦ ॥

ವಿದ್ಯಾರಸಾಲಾಟವೀ ವಸಂತನೆನಿಪನ । ವಿದ್ಯಾದ್ಯಘಗ್ರಂಥಿ ಮೃದ್ಘಟಕೆ ಮುದ್ಗರನ ॥ ಹೃದ್ಯವಾದುಪದೇಶಸುಧೆಯ ದಾನವ ಗೆಯ್ದು ಜಗವನುದ್ಧರಿಸುವ ಚರ ॥। ಸದ್ಯಕ್ಪದಪಯೋಜ ಜ... ವನು ಮುಮುಕ್ಷುಗಳು । ವಿದ್ಯಮಾನ ಶಿವಗುರುಗಳದೊಲು ಗ್ರ ಹಿಸುತ ಲ ॥ ಭೇದ್ಯಮಾಯೆಯಾಮದವ ಭೇದಿಸುತೆ ನಿಶ್ರೇಯಸ ಪದವನ್ನೈದುವರಲ ॥। ೫೧ ॥।

ಪ್ರಸಾದ ತತ್ತ್ವನಿರೂಪಣಂ

ವರ "ಗುರೂಚ್ಛಿಷ್ಟಂತು ಭೋಕ್ತವ್ಯ" ಮಿತಿಗೃಹ್ಯ । ಕರಮು ಹರ್ಷಿಯ ವಚನದಿಂದ ಸೇವಿಸುವದುಂ ॥ ಗುರುಸುಪ್ರಸಾದವನ ದನ್ನೇ ಪತಂಜಲಿ ಸ್ಮೃತಿಯು ಬಂಣಿಸುವದು ಗಡ ॥। ಅರಿಯೆ "ಉ ದ್ರೇಣಾತ್ತ"ಮೆಂದು ವೇದವಚನದಿ । ಸುರಿಗಂಣಿನ ಶಿವನುಂಡು ದುದಂ ಕುಡಿದುದಂ ॥ ಪರಮ ಭಕ್ತಿಯೊಳು ಪ್ರಸಾದವೆಂದುರೆ ಸೇ ವಿಸುವದುಪಾಸಕನು ಜಗದಿ ॥। ೫೨ ॥।

ಪತ್ರಪುಷ್ಪಫಲಜಲಾನ್ನಮೊದಲಹ ನಿಖಿಲ ಪ । ವಿತ್ರಭೋಗ್ಯ ಪದಾರ್ಥಜಾತದೊಳು ಜಗದಿ ತ್ರಿ ॥ ಣೇತ್ರಗೆ ಸಮರ್ಪಿಸದುದು ಗ್ರಹಿಸಬಾರದು ಭವಕ್ಕೆ ಬೇಸತ್ತ ನರನು ॥। ಪುತ್ರನೇ ಲಿಂಗಾಂಗ ಸಂಗಿ ದ್ವಿಜನು ಧನದ । ಮಿತ್ರಭುಕ್ತೋಚ್ಛಿಷ್ಟವನೆ ಸೇವಿಪುದು ಜಲಜ ॥ ನೇತ್ರಾದಿ ಸುರರುಂಡುಳಿದುದನ್ನು ಮರೆದಾದರುಪಸೇವಿಸ ಲೆಬಾರದು ॥। ೫೩ ॥।

ಪೂಗಣೆಯನ ಸುರುಹಿದ ಶಿವನ ಪ್ರಸಾದದುರು । ಯೋಗಬ ದಿಂದಿಹದೊಳಖಿಳ ಸುಖಗಳನು ಸಲೆ ॥ ಭೋಗಿಸಿ ಕಲೇವರಾಂ ದಿ ಪರಮ ಕೈವಲ್ಯರಮೆಯ ರಮಣನೆನಿಸುವನು ॥। ಆಗಮ... ನೆ ವಿಚಾರಿಸೆ ಮೂರು ಜಗದೊಳಗೆ । ನಾಗಭೂಷಣನ ಪ್ರಸಾದಕ... ಯಧಿಕ ವಾ ॥ ವಾಗಲಾರವದರಿಂದದು ಸುರಾಸುರನರವರರುಗಳ ಸೇವ್ಯಮಹುದು ॥। ೫೪ ॥।

ಭುಕ್ತಿಯನು ಮುಕ್ತಿಯನು ಕೊಡುವಶಕ್ತಿಯುತಶಿವ । ಭುಕ್ತ
ನಿರ್ಮಾಲ್ಯವನು ಪೂರ್ವಪುಣ್ಯದ ರಾಶಿ ॥ ಯುಕ್ತನಾಗಿರುವ ಪುರುಷ
ವೃಷಭನನುಭವಿಸುವನು ಗುಣಮಣಿಹಾರ ನೃವರ ||| ಭಕ್ತಿಭರಭ
ರಿತರಾದ ಶಿವಾರ್ಚಕರು ಮತ್ತೆ । ಸೂಕ್ತಿಸುಧೆಯಿಂ ಮಧುರವೀರಶೈ
ವರುರೆ ಪೂ ॥ ರ್ವೋಕ್ತನಿರ್ಮಾಲ್ಯವನುಭವಿಸಲರ್ಹರಿತರರೆನಿಸಲಾ
ರರು ಭುವನದೊಳು ||| ೫೫ |||

ಶಂಭುವಿನಿವೇದಿತವಹ ಪ್ರಸಾದವನು ನೆರೆ । ನಂಬುಗೆಯ
ನೊಂದಿ ನರವರನು ಭೋಗಿಪುದದರ ॥ ಲಿಂಬುಗೊಂಡೊಂದೊಂದಗು
ಳಿನಲ್ಲಿ ಪುಂಡರೀಕಕ್ರತುವಿನ ಸುಕೃತವಿದೆ ||| ಸಾಂಬನಿಂ ಸ್ವೀಕೃತ
ವಿರುವದರಿಂ ನಿರ್ಮಾಲ್ಯ । ವೆಂಬುವಂತಿಲ್ಲದು ಸುನಿರ್ಮಲವು ಶುಭ
ವಿಹುದು ॥ ಕುಂಭಿನಿಯೊಳಗದನಂ ವೀರಶೈವರು ಸೇವಿಸಲು ಯೋ
ಗ್ಯರಿತರರಲ್ಲ ||| ೫೬ |||

ವೀರಶೈವಜಗಕುರು ಗುರುವಾಗಿಹುದರಿಂದ । ಲಾರಾರುಬೀರ
ದಿಹ ಶಿವತತ್ತ್ವದೋಜವ ॥ ಲ್ಲೂರುವದರಿಂ ಮಹೋಪಕೃತಿಮಂತ
ಗುರುವಿನುದಾರ ಪ್ರಸಾದವು ಪರ ||| ಕಾರುಣಿಕ ಶಿವನದಂತೆಯೆ
ನಿತ್ಯನಿಜಸುಖಾ । ಕಾರವನು ಕಾಣಲು ಮುಮುಕ್ಷುಮರ್ತ್ಯರ
ಮನೋ ॥ ಹಾರಿರನ್ನದಗನ್ನಡಿಯೆನಿಸಿರ್ಪುದು ಸರ್ಪಭೂಷನ ಬಕು
ತಿಗುರುಪನೆ ||| ೫೭ |||

ದ್ವಾಪರದೊಳಾಪರಮ ದೂರ್ವಾಸನೆಂಬಾವತಿ । ಕೋಪಿಯ
ಹ ವೀರಶೈವ ತಪೋಧನನುರುಭವ ॥ ತಾಪವನು ಕಳೆಯುವವರ
ಪ್ರಸಾದವ ಬಕುತಿಯಿಂ ಸೇವಿಸೆ ಯುಳಿದುದನು ||| ಪಾಪಾಪನೋ
ದನದ ಬುದ್ಧಿಯಿಂದಲೆ ಹರಿಯು । ಲೇಪಿಸಿರೆ ಆಪುಣ್ಯಪುರುಷೋ
ತ್ತಮನ ಕಾಯ ॥ ನಾಪರಿ ಸುವಜ್ರದಂತತಿಕಠಿಣವಿತರ ಶಸ್ತ್ರಕಭೇ
ದ್ಯವೆನಿಸಿತಾಗ ||| ೫೮ |||

ವಿದ್ಯಾರಸಾಲಾಟವೀ ವಸಂತನೆನಿಪನ । ವಿದ್ಯಾದ್ರೃಢಗ್ರಂಥಿ ಮೃದ್ಘಟಿಕೆ ಮುದ್ಗರನ ॥ ಹೃದ್ಯವಾದುಪದೇಶಸುಧೆಯ ದಾನವ ಗೆಯ್ದು ಜಗವನುದ್ಧರಿಸುವ ಚರ ॥। ಸುದ್ಯತ್ಪದಪಯೋಜ ಜಲ ವನು ಮುಮುಕ್ಷುಗಳು । ವಿದ್ಯಮಾನ ಶಿವಗುರುಗಳದೊಲು ಗ್ರ ಹಿಸುತ ಲ ॥ ಭೇದ್ಯಮಾಯಾಮದವ ಭೇದಿಸುತೆ ನಿಶ್ಶ್ರೇಯಸ ಪದವನ್ನೈದುವರಲ ॥। ೫೧ ॥।

ಪ್ರಸಾದ ತತ್ತ್ವನಿರೂಪಣಂ

ವರ "ಗುರೂಚ್ಛಿಷ್ಟಂತು ಭೋಕ್ತವ್ಯ ಮಿತಿಗೃಹ್ಯ । ಕರಮು ಹರ್ಷಿಯ ವಚನದಿಂದ ಸೇವಿಸುವದುಂ ॥ ಗುರುಸುಪ್ರಸಾದವನ ದನ್ನೇ ಪತಂಜಲಿ ಸ್ಮೃತಿಯು ಬಣ್ಣಿಸುವದು ಗಡ ॥। ಅರಿಯೆ "ರು ದ್ರೇಣಾತ್ತ"ಮೆಂದು ವೇದವಚನದಿ । ಸುರಿಗಣ್ಣಿನ ಶಿವನುಂಡು ದುದಂ ಕುಡಿದುದಂ ॥ ಪರಮ ಭಕ್ತಿಯೊಳು ಪ್ರಸಾದವೆಂದುರೆ ಸೇ ವಿಸುವದುಪಾಸಕನು ಜಗದಿ ॥। ೫೨ ॥।

ಪತ್ರಪುಷ್ಪಫಲಜಲಾನ್ನಮೊದಲಹ ನಿಖಿಲ ಪ । ವಿತ್ರಭೋಗ್ಯ ಪದಾರ್ಥಜಾತದೊಳು ಜಗದಿ ತ್ರಿ ॥ ಣೇತ್ರಗೆ ಸಮರ್ಪಿಸದುದ ಗ್ರಹಿಸಬಾರದು ಭವಕ್ಕೆ ಬೇಸತ್ತ ನರನು ॥। ಪುತ್ರನೇ ಲಿಂಗಾಂಗ ಸಂಗಿ ದ್ವಿಜನು ಧನದ । ಮಿತ್ರಭುಕ್ತೋಚ್ಛಿಷ್ಟವನೆ ಸೇವಿಪುದು ಜಲಜ ॥ ನೇತ್ರಾದಿ ಸುರರುಂಡುಳಿದುದನ್ನು ಮರೆದಾದರುಪಸೇವಿಸ ಲೆಬಾರದು ॥। ೫೩ ॥।

ಪೂಗಣೆಯನ ಸುರುಹಿದ ಶಿವನ ಪ್ರಸಾದದುರು । ಯೋಗಬಲ ದಿಂದಿಹದೊಳಖಿಳ ಸುಖಗಳನು ಸಲೆ ॥ ಭೋಗಿಸಿ ಕಲೇವರಾಂತ್ಯ ದಿ ಪರಮ ಕೈವಲ್ಯರಮೆಯ ರಮಣನೆನಿಸುವನು ॥। ಆಗಮಜ್ಞ ನೆ ವಿಚಾರಿಸೆ ಮೂರು ಜಗದೊಳಗೆ । ನಾಗಭೂಷಣನ ಪ್ರಸಾದಕ್ಕೆ ಯಧಿಕ ವಾ ॥ ವಾಗಲಾರವದರಿಂದದು ಸುರಾಸುರನರವರರುಗಳ ಸೇವ್ಯವಹುದು ॥। ೫೪ ॥।

ಭುಕ್ತಿಯನು ಮುಕ್ತಿಯನು ಕೊಡುವಶಕ್ತಿಯುತಶಿವ । ಭುಕ್ತ ನಿರ್ಮಾಲ್ಯವನು ಪೂರ್ವಪುಣ್ಯದ ರಾಶಿ ॥ ಯುಕ್ತನಾಗಿರುವ ಪುರುಷ ವೃಷಭನನುಭವಿಸುವನು ಗುಣಮಣಿಹಾರ ನೃವರ ॥। ಭಕ್ತಿಭರಭ ರಿತರಾದ ಶಿವಾರ್ಚಕರು ಮತ್ತೆ । ಸೂಕ್ತಿಸುಧೆಯಿಂ ಮಧುರವೀರಶೈ ವರುರೆ ಪೂ ॥ ರ್ವೋಕ್ತನಿರ್ಮಾಲ್ಯವನುಭವಿಸಲರ್ಹರಿತರರೆನಿಸಲಾ ರರು ಭುವನದೊಳು ॥। ೫೫ ॥।

ಶಂಭುವಿನಿವೇದಿತವಹ ಪ್ರಸಾದವನು ನೆರೆ । ನಂಬುಗೆಯ ನೊಂದಿ ನರವರನು ಭೋಗಿಪುದದರ ॥ ಲಿಂಬುಗೊಂಡೊಂದೊಂದಗು ಳಿನಲ್ಲಿ ಪುಂಡರೀಕಕ್ರತುವಿನ ಸುಕೃತವಿದೆ ॥। ಸಾಂಬನಿಂ ಸ್ವೀಕೃತ ವಿರುವದರಿಂ ನಿರ್ಮಾಲ್ಯ । ವೆಂಬುವಂತಿಲ್ಲದು ಸುನಿರ್ಮಲವು ಶುಭ ವಿಹುದು ॥ ಕುಂಭಿನಿಯೊಳಗದನಂ ವೀರಶೈವರು ಸೇವಿಸಲು ಯೋ ಗ್ಯರಿತರರಲ್ಲ ॥। ೫೬ ॥।

ವೀರಶೈವಜಗಕುರು ಗುರುವಾಗಿಹುದರಿಂದ । ಲಾರಾರುಬೀರ ದಿಹ ಶಿವತತ್ತ್ವದೋಜವ ॥ ಲ್ಲೂರುವದರಿಂ ಮಹೋಪಕೃತಿಮಂತ ಗುರುವಿನುದಾರ ಪ್ರಸಾದವು ಪರ ॥। ಕಾರುಣಿಕ ಶಿವನದಂತೆಯೆ ನಿತ್ಯನಿಜಸುಖಾ । ಕಾರವನು ಕಾಣಲು ಮುಮುಕ್ಷುಮರ್ತ್ಯರ ಮನೋ ॥ ಹಾರಿರನ್ನದಗನ್ನಡಿಯೆನಿಸಿರ್ಪುದು ಸರ್ಪಭೂಷನ ಬಕು ತಿಗುರುಪನೆ ॥। ೫೭ ॥।

ದ್ವಾಪರದೊಳಾಪರಮ ದೂರ್ವಾಸನೆಂಬುವತಿ । ಕೋಪಿಯ ಹ ವೀರಶೈವ ತಪೋಧನನುರುಭವ ॥ ತಾಪವನು ಕಳೆಯುವವರ ಪ್ರಸಾದವ ಬಕುತಿಯಿಂ ಸೇವಿಸೆ ಯುಳಿದುದನು ॥। ಪಾಪಾಪನೋ ದನದ ಬುದ್ಧಿಯಿಂದಲೆ ಹರಿಯು । ಲೇಪಿಸಿರೆ ಆಪುಣ್ಯಪುರುಷೋ ತ್ತಮನ ಕಾಯ ॥ ವಾಪರಿ ಸುವಜ್ರದಂತತಿಕಠಿಣವಿತರ ಶಸ್ತ್ರಕಭೇ ದ್ಯವೆನಿಸಿತಾಗ ॥। ೫೮ ॥।

ತಾನ ಭೋಗಿಸಲಿರುವ ಸರ್ವವಸ್ತುತತಿಯಂ । ಬಾನ್ನವಿರಸಿಗೆ ಹೇಗೊಹಾಗೆ ಗುರುವಿಂಗಿತ್ತು ॥ ಮಾನವನು ಸೇವಿಸುವದನ್ಯಥಾ ಪಾಪಿಯಾಗುತ ದುಃಖಪೊಂದುವನು ನಿ ।॥ ಜ್ಞಾನಂದವಾರಾಶಿ ವಾರಿ ಮಗ್ನ ಪರಮ ಶಿ । ವಾನುಭಾವಿ ಚರಪ್ರಸಾದವಂ ಜಗದಿ ಬಹು॥ ಮಾನಸದಿಂ ಸೇವಿಸೆ ಯದಾರಾಧಕಗೆ ಭುಕ್ತಿಯನು ಮುಕ್ತಿಯನು ಕೊಡುವದು ।॥ ೫೯ ।॥

ಹೇಳಿದಷ್ಟಾವರಣಗಳ ಸಂಪದುಳ್ಳಂತ । ಕೇಳು ಪಂಚಾಚಾರಪರನಾದ ಮನುಜನುರು ॥ ಭಾಳಲೋಚನ ಭಕ್ತಿಭೂಷಣವಿಲಸಿತರಾದ ಶಿವಭಕ್ತ್ಯುತ್ತಂಸರ ॥। ಮೇಳವನ್ನೊಲ್ಲೈಸುತೆ ತ್ರಿಪ್ರಸಾದವನು । ಪೇಳಲೇನನುರಾಗದಿಂ ಸೇವಿಸುತೆ ಜಗದಿ ॥ ಬಾಳುವನು ಲಿಂಗಸಂಗಿಯವಸಾನದೊಳು ಮುಕ್ತ್ಯಂಗನೆಯ ವರನಾಗುವ ।॥ ೬೦ ।॥

ಆರುದಿಕ್ಕಿಲ್ಲವನನಂತೆ ಕರದಿ ಕಪಾಲ । ಧಾರಿಯಾಗಿ ಸುಡುಗಾಡೊಳಲಿಯುತಿಹ ಶಿವನಾ ॥ ಕಾರವಂ ಕಂಡುಕರುಣಂ ಬಟ್ಟು ತಿಳಿಯಲಳವಟ್ಟು ಕೈಪಿಡಿದವನನು ।॥ ಮೂರುಲೋಕಗಳ ಪಾಲನಪಟ್ಟವಂ ಗಟ್ಟಿ । ಸಾರಸುರ ಸಾರ್ವಭೌಮನನು ಮಾಡಿ ಮಟಮಾ ॥ ಧಾರೆಯಾವ ಧರಾಸುತೆಯನು ಸುದಯಾಯುತೆಯನು ಶಿವೆಯನು ನಮಿಸುವೆನು ನಾ ।॥ ೬೧ ।॥

ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳು
ನಾಲ್ಕನೆಯ ಸಂಧಿ ಪದಂ ೬೧ ಕ್ಕಂ
ಮಂಗಲಮಸ್ತು.





## — ಐದನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ— ಮಾಗೆಯಿಂಬಂದ ಮಂದತ್ವವದುಪೋಗಿ ಮಧು ।
ಯೋಗದಿಂ ನೇಸರನೊಲು ಮೊದಲಿನವಸ್ಥೆಯನು ॥
ನೀಗಿ ಜಗದಾಚಾರ್ಯ ಪದದಿಂದ ತೇಜೋಮಯನೆನಿಸಿ
ಬೆಳಗಿದ ಗುರುವು ॥೦॥

ಬಾಲೇಂದುಶೇಖರನು ಬಕುತಿಯಿಂ ಕೊಟ್ಟಕೆನೆ । ನಾಲು
ಕುಡಿದುದನು ಪರಿಕಿಸಲು ಗುಡಿಗೈದಿವರ ॥ ಲೀಲೆಯಿಂ ಕುಡಿಯದಿಹ
ಶಿವಲಿಂಗವಂ ಕಂಡು ಕೋಪದಿ ಘುಡಿಘುಡಿಸಿ ಯಳು ॥ ನಾಲಲಿತ
ಕೊಡಗೂಸನುರು ಖಡ್ಗದಿಂ ಕಡಿಯ । ಲಾಲಸ್ಯಮಾಡದಾತುರಿಪ
ಪಿತನಂ ದೂಡಿ ॥ ಬಾಲೆಯಂ ತನ್ನಾತ್ಮದೊಳೈಕ್ಯಮಂ ಮಾಡಿದ
ಮೃಡನೀಗೆಮಗೆ ಸುಖವ ॥ ೧ ॥

ಸದ್ಧರ್ಮ ಸಿಂಹಾಸನದೊಳಖಿಲ ಜಗವ ಸಲೆ । ಯುದ್ಧರಿಸ
ಲುರೆ ಬದ್ಧಕಟಿಯೆಂಹ ಜಗದ್ಗುರುವು ॥ ಸಿದ್ಧಲಿಂಗನುದಯಾದ್ರಿ
ಶಿಖರದಲಿ ಪತಂಗನಂತೆ ಭುವಿರಾಜಿಸಿದನು ॥ "ಬುದ್ಧದೇವನಹಿಂಸೆ,"
"ಭೂತೇಶ್ವರನ ಭೂತ । ಸದ್ದಯೆಯು," "ಸರ್ವಂಸಹೆಯ ಸಹಿಷ್ಣುತೆ,"
ಶೇಷ ॥ ನುದ್ಧತಕ್ಷಮೆ ಯಾಗುರು ಶಿವಯೋಗಿಯೊಳಗಿಹವುದ್ಭೂತ
ಗಳೆನಿಸಿ ಕಣ ॥ ೨ ॥

ದೇವದಾನವ ಮಾನವಕಿರೀಟಕೋಟಿಗಳೊ । ಳಾವನಾಜ್ಞಾನರ್ತಕಿಯು ಸುಖದಿ ನರ್ತಿಸುವ ॥ ಆವನು ಜಿತಾಂತರಂಗ ಮುನಿಪುಂಗವರ ಸಂಘವನಂಜಿಸುತ ಭಂಜಿಸು ॥। ತಾವನು ತನಗೆ ಸರಿಯುರಸನಿಲ್ಲೆನುತೆಗರ್ಜಿ । ಪಾವನಜಬಾಣಸಹ ಭಾವಜನಿರ್ಯಿ ಮಹಾ ॥ ಭಾವ ಶಿವಯೋಗಿ ಸನ್ನಿಧಿಯಲ್ಲಿ ಪೇಣಕಿಂತಲು ನೆತ್ತಗಿರುತಿರುವನು ॥। ೩ ।॥

" ಸರ್ವಜೀವಾಳಿಗಳನು ಸುಖದಿಂಪಲಿಗೆಲ್ವ । ಖರ್ವದುರ್ಗರ್ವದಿಂ ಶರ್ವರೀಚರರೊಲಿಹ ॥ ದುರ್ವಹಾರಿಗಳ ಷಡ್ವರ್ಗವೆಂಬ ಶರೀರದೊಳಗಿರುವ ಶತೃಗಳನು ॥। ಚೇರ್ವರಿದು ಕಿತ್ತೊಗೆದಖಿಲ ಸಂಯುಮಿ ಸಮೂಹ । ಸಾರ್ವಭೌಮ ಪದದೊಳು ಮುದವೆತ್ತಿರುತ್ತಲಾ ॥ ಪೂರ್ವದಾಚಾರ್ಯರಾಚಾರವನ್ನಾಚರಿಸುತೆ ನಿರಾಲಸನೆನಿಸಿಹನು ॥। ೪ ।॥ "

ಲಾವಣ್ಯನೂತ್ನತಾರುಣ್ಯಸದಗಣ್ಯ ವು । ಣ್ಯಾವಾಪ್ಯ ತಪವು ಬಾಲಾರುಣನೊಲು ಪೊಳೆಯುವ ॥ ಪಾವನ ಬ್ರಹ್ಮತೇಜವುರೆ ಶಾಪಾನುಗ್ರಹ ಬಲವೀತನೊಳಿರುವವು ।॥ ಧಾವಲ್ಯದೊಲವಿಂದ ಪರಿಭೂತಶಾರದ ಸು । ಪಾರ್ವಣ ಶಶಾಂಕನುಳ್ಳ ನವಕೀರ್ತಿತತಿಯಾ॥ ಶಾವನಜಮುಖಿಯುರಂಗಗಳಿಗಾವರಣದ ದುಕೂಲಾಗಿಹುದು ಗುರುವಿನ ।॥ ೫ ।॥

ಧರೆಯುನಾಗಸವನು ಬಿಡದೆ ಸುತ್ತಿಮುತ್ತಿರುವ । ಗುರುವಿನ ಧವಲಯುಶೋರಾಶಿಯುಂ ಕೈರವಗ ॥ ಳಿರೆಯುನ ಬೆಳಗಿದೆಂದು ಚೊನ್ನವಕ್ಕಿ ರಮಿಸಿತು, ಸುರಿಪಾಲಿದೆಂದು ಮುಗ್ಧೆ ।॥ ಯುರು ಗೋವುಗಳ ಕೆಚ್ಚಲಗಳ ಕೆಳಗೆ ಕರೆಮುಗಿ । ಯಿರಿಸಿದರು, ಭಿಲ್ಲೆಯರು ಬೋರೆಯುಂ ಮುತ್ತೆಂದು ॥ ಕರನೀಡಿದರು, ಕಾಡುಬೆಕ್ಕುಗಳು ಪಾಲೆಂದು ಬಾಯಿಕ್ಕಿದವು ನೆಕ್ಕಲು ॥। ೬ ।॥

ಮಧುಮಾಸದ ಪಗಲೆರೆಯನೊಲು ದಿನದಿನದೊಳು ವಿ। ಬುಧ
ವರಗುರುವಿನುರು ತಪಸ್ತೇಜದ ಘನತೆಯು ॥ ಬಿದಿಗಿಯ ವಿಧುವಿನ
ಬೆಳದಿಂಗಳೊಲು ದೇಶಿಕನ ವರಕೀರ್ತಿ ಬೆಳೆದು ಹೊಳೆದು ॥। ಮದವೇ
ರಿದರಿಗಳ ಹೃದಯದೊಳು ಘನತರ ತಾ। ಪದುದಯವನೊದಗಿಸಿದ
ವು ಭುವನದಿ ಸಜ್ಜನಾ ॥ ಭ್ಯುದಯವನು ಸಹಿಸುವರೆ ಪರರ ಪರಿ
ವಾದಾನುಸಂಧಾನ ಫಲರು ಖಲರು ॥। ೭ ॥।

ಎಲ್ಲಪಶುಗಳ ನಿಕರದೊಳು ಹಸುವು ಸಲೆವಸುಧೆ । ಯಲ್ಲಿ
ಬಹುಸತ್ವಗುಣಶಾಲಿದೇಹಿಯುಹುದಿದ ॥ ರೆಲ್ಲ ಪಾಲ್ಮೊಸರು ಬೆಂಣೆ
ಗಳನಾರೋಗಿ ಪರಿಗಾರೋಗ್ಯಭಾಗ್ಯವನ್ನು ॥। ನಿಲ್ಲದೆ ಕೊಡುವದಿ
ದರ ಸರ್ವಾವಯವಗಳಲಿ । ಬಲ್ಲವರು ಪೇಳುವರು ವಿಧಿವಿಷ್ಣುಮೊ
ದಲೆನಿಪ ॥ ರೆಲ್ಲ ದೇವತೆಗಳುಲ್ಲಾಸದಿಂದಿರುವರೆಂದದರಿಂದಿದು ಪವಿ
ತ್ರವು ॥। ೮ ॥।

ಹಸುವು ಜಗದಾಚಾರ್ಯಶೇಖರನ ಜೀವಾಳ । ದುಸುರು, ಸೇವಿ
ಪ ಜೀವಿಗಳಿಗಮೃತ ಜೀವಿಗಳ ॥ ಪಶುವು, ಯಾಗಾದಿ ಪುಣ್ಯ
ಕ್ರಿಯೆಗಳವಸಾನದೊಳವಸನ್ನ ಪರಲೋಕ ॥। ಕೊಸೆದು ಕರೆದೊ
ಯ್ವ ಜೀವದಸಖಿಯು, ಶೈವರ । ಲ್ಲೆಸೆವ ಪಾವನತರ ಭಸಿತದ
ಭವ್ಯಪ್ರಸುವೆ ॥ ನಿಸುವದು ಜಗವ ಪಾಲುಬೆಂಣೆಯಿಂದೋವು
ದೆಂದು ಪ್ರಿಯವು ಗುರುವರನಿಗೆ ॥। ೯ ॥।

ಶಾಂತನಂತೇವಾಸಿ ಹೃದ್ಭೂಮಿಯೊಳಗೆದ್ದ । ಕಂತುಹರ
ಭಕ್ತಿಬೀಜಾಂಕುರವನು ಪರತರ ॥ ಸಂತಸದಿವಾಕ್ಕುಂಭವದನ
ಸಂಭವ ಬೋಧವಾರಿಯಿಂದ ಬೆಳಸಿ ರಸ ॥ ದಂತುರೋರು ಸು
ಧರ್ಮಫಲವನುಣಿಸಿ ಯುವನನು । ಶಾಂತಿಮಯ ಸುಖನಿಶಾಂತ
ದೊಳಿರಿಸಿ ಪೋಷಿಪನ ॥ ಚಿಂತ್ಯ ಮಹಿಮಾಕರನು ಲೋಕಗುರುವ
ರನು ಗುಣಗಂಭೀರನು ಭುವನದೊಳು ॥। ೧೦ ॥।

ಧರಿಸಿ ಶಿರದೊಳು ಶಿಷ್ಯಜನತೆಯಂ ಪಾಲಿಸುವ । ವರಭಾರ
ವನು ತದಾಚರಿಸಿ ದಣಿಯನು ಮಣಿಯ ॥ ನರಿಯೆ ಶೇಷಾಹಿಯೊಲು
ಮತ್ತೆ ದಿವ್ಯವೆನಿಪ ಶಿವೋಪಾಸ್ತಿ ಮೊದಲಾಗಿರು ॥। ವುರುಕರ್ಮತತಿ
ಯಿಂದಲು ಸದಾ ಸದಾಚಾರ । ಚರಣದಿಂದಲನುಕಂಪಾಶಾಂತಿ ಸುಧೆ
ಯಿಂದ ॥ ಭರಿತಾವಲೋಕನಗಳಿಂ ಸುವಾಕ್ಯಗಳಿಂ ಜಗವ ತುಷ್ಟಿ
ಗೊಳಿಪನವನು ॥। ೧೧ ॥।

ಪುರದೊಳಿಹ ಶಿಷ್ಯರು ಮೊದಲೆನಿಸುವ ಬಹುಜನರು । ಪರಿತು
ಷ್ಟಿಯಿಂದ ಬೆಳಗಿನೊಳೆದ್ದು ಹರನಂತೆ ॥ ಗುರುವನು ಹೃದಯ
ದೊಳುನೆನೆದು ಶೌಚಕರ್ಮಪೂರ್ವಕ ಮಜ್ಜನವನು ಮಾಡಿ ॥। ಕರ
ಪೀಠದಿಷ್ಟಲಿಂಗವನುಪೂಜಿಸಿ ಸೂಪ । ಕರಣದಿಂ ತನ್ಮಠಕೆ ಬಳಿಕ್ಕೈದಿ
ಗುರುವರನ ॥ ಚರಣಗಳಿಗಭಿನಮಿಸಿ ಮನಿಗೆಬಂದುಂಡು ಪೋಗುವ
ರುದ್ಯಮಕೆ ದಿನದಿನ ॥। ೧೨ ॥।

ಎಂದಾದರೊಂದುದಿನ ಲೋಕಗುರುದರ್ಶನವ । ಪೊಂದದಿರ
ಲಾದಿನವು ವಂಧ್ಯವೆಂದುರೆ ಮತ್ತೆ ॥ ಗೊಂದೆವಳವಿಗೆಯಂತೆ ದೇಶಿ
ಕನ ಪೂಜಿಸದಲನ್ನಗ್ರಹಣವು ಪಾಪ ॥। ಯೆಂದುತಿಳಿದು "ನಗು
ರೋರಧಿಕ" ವೆಂಬ ಷಡಕ್ಷ । ರಂದವಾಗಿಹ ಮಂತ್ರವನು ದಿನದಿನ
ಸಡಗರ ॥ ದಿಂದುಚ್ಚರಿಸುವನು ಪ್ರತಿಯೋರ್ವನಬ್ಬರದಲುಬ್ಬಿಬ್ಬಿ
ಜಗದೊಳಗ ॥। ೧೩ ॥।

ಆರಿಹದೊಳು ಗುರುಲಿಂಗಚರಪುಂಗವರ ವರ । ಪೂರುಷಾರ್ಥ
ಗಳನೀವಡಿದಾವರೆಗಳನುಪ ॥ ಚಾರಪೂರ್ವಕ ಪೂಜಿಸುವರಾರು
ನೀತಿನೀರ್ಝಣಿಸಿ ಹೃದಯೋರ್ವಿಯೊಳಗು ॥। ದಾರಭಾವದಿ ಬೆಳೆ
ಸಿದಾಚಾರ ಪರಮು ಮಂ । ದಾರತರುಫಲವನಾವಾಗಲುಂಣುವರ
ವರ ॥ ಪಾರ ಧನವಂತರಿರಲಧನರಿರಲಿ ಗುರುವರನಾದರವವರೊ
ಳಿರುವದು ॥। ೧೪ ॥।

ಒಂದುದಿನ ಮೋದಮೂರ್ತಿಯೆನಿಸುವ ಚಿಲ್ಲಿಂಗ । ಸುಂದರ
ಯಶೋಲಿಂಗ ಸಿದ್ಧಲಿಂಗುರುಗುರು ಪು ॥ ರಂದರನ ಚರಣಾರ
ವಿಂದವನಭಿನಮಿಸುತೆ ಬಿನ್ನೈಪ ಕೊಟ್ಟೂರಿನ ॥। ಬಂಧುರ ಬಕು
ತರ ವೃಂದದ ಬೇಡಿಕೆಯನು ಮುದ । ದಿಂದ ಜಗದಾಚಾರ್ಯನಭಿ
ನಂದಿಸುತಿರಲವ ॥ ರಂದು ಪರಮಾನಂದರಾಗಿಪೋಗಿ ಪುರದಂದದ
ದಂದುಗದೊಳಿದ್ದರು ॥। ೧೫ ॥।

ಸತ್ಯಸಂಧನಹ ಗುರುಸಾರ್ವಭೌಮನು ತಮ್ಮ । ಪತ್ತನದ
ಹತ್ತಿರಕೆ ಬಂದುದಂ ಕೇಳಿ ಮ । ರ್ತ್ಯೋತ್ತಮರೆನಿಪ ಮಠಾಧೀಶ
ಗೌಡ ಕುಲಕರ್ಣಿ ಶ್ರೇಷ್ಠಿ ಶಿರಿವಂತರು ॥। ಭೃತ್ಯಭಾವದವರಾಗಿ
ನಿಖಿಲ ಪುರದಜನರು । ಬಿತ್ತರಂ ಬಡೆದು ಬಂದು ಸಲೆಸಾಷ್ಟಾಂಗ
ಮಾ ॥ ಡುತ್ತಿಷ್ಟಿಕಾಪಾಲವನ್ನೊಪ್ಪಿಸಿ ಪುರಕೆ ಬಿಜಯಮಾಡ
ಲರ್ಥಿಸಿದರು ॥। ೧೬ ॥।

ಮತ್ತದಂತಾವಲ ಚಟುಲ ತುರಂಗ ಶತಾಂಗ । ಪತ್ತಿಗಳಹ
ಚತುರಂಗಪಡೆ ಗಡಲಂತೆ ನಡೆ ॥ ಮುತ್ತಿನ ಬಿಳಿಗೊಡೆ ಸೇನಾಬಲ
ದಿ ನಕಳಂಕನೆನಿಸಲ್ಕೈದುಡುಸಹಿತ ಭ ॥ ಪತಿಯಂತೆ ತೋರೆ ತತ್ಪ
ದಯುಗಲವಂ ಭಜಿಸಿ । ಸತ್ಯಲೋಕಕೆ ಪಾರಲಾತುರಿಸುವಂಚೆಗ
ಳೊ ॥ ಲುತ್ತಮ ಚವರಿಗಳೆಸೆಯಲು ಕಾಹಳೆಗಳು ಕರ್ಣಗಳೊಡನೆ
ಭೋರ್ಗರೆದವು ॥। ೧೭ ॥।

ಮತ್ತೆ ಪಟಹ ಮೊದಲಹ ವಾದ್ಯಂಗಳರವದಿ । ಗ್ಭಿತ್ತಿಗಳೊ
ಡೆವವೊಲೊತ್ತರದಲೆಲ್ಲೆಡೆಯಲ್ಲಿ ॥ ಬಿತ್ತರಸಲ್ಕೈಬಾಣದ ಪತಾಕೆ
ನಂದಿಧ್ವಜಗಳಾಗಸವನು ಭರದಿ ॥। ಮುತ್ತಿಟ್ಟು ಮೂದಲಿಸೆ
ಪಂಚಾರತಿ ಪಿಡಿದಿಹ । ಮುತ್ತೈದಿಯರು ಸರಸಮಂಗಲ ಪದಗಳ
ಪಾ ॥ ಡುತ್ತ ಮಂದಗತಿಯಿಂ ಪಿಂದೆಬರೆ, ವೇದಘೋಷದ ವೈದಿ
ಕರು ಮುಂದಿರೆ ॥। ೧೮ ॥।

ಬಟ್ಟೆಂಗಿಗಳಸಾಲು ಬಿರುದಾವಳಿಗಳನ್ನು । ಬಿಟ್ಟುಬಿಡದುದ್ಘೋಷಿಸುತ್ತಿರೆ ಪರಾಕು ಸುರ ॥ ಬಟ್ಟೆಯುನಡೆರುತಿರಲು ಶೃಂಗಾರ ಬಂಗಾರದಡ್ಡ ಪಲ್ಲಕಿಯಲಿ ಚರ ॥ ಪಟ್ಟಾಧಿಪ ಜಗದಾಚಾರ್ಯನ ಮೆರವಣಿಗೆಯು । ಪುಟ್ಟವಲ್ಲದ ಪಟ್ಟಣದ ಮುಖ್ಯ ವೀಧಿಗಳೊ॥ ಳಟ್ಟಹಾಸದಿ ಜರಿಗಿತು ಮುದದಿಂ ಮಾಳ್ಪ ಜನರ ಜಯಜಯನಾದದೊಡನೆ ॥ ೧೯ ॥

ಅಂದಂಗಳಹ ಹಂದರಗಳಲ್ಲಿ ಗುರುಭಕ್ತಿ । ಯಿಂದಲಲ್ಲಲ್ಲಿ ಕಾಣಿಕೆಯಿತ್ತಿಹ ಪುರೀ ಪು. ॥ ರಂದರರನು ಫಲಮಂತ್ರಾಕ್ಷತಗಳಿಂದಲಾಶೀರ್ವದಿಸಿ ಕಿಕ್ಕಿರಿದುರೆ ॥ ನಿಂದು ಶಿರಬಾಗಿ ವಂದನೆಗಳನ್ನರ್ಪಿಸ ನೃ । ವೃಂದಮಂ ಮಂದಹಾಸದಿನಾದರಿಸುತ ಸಲೆ ॥ ಬಂದುದು ಚಿದಾನಂದಘನನ ಸನ್ನಿಧಿಯು ದರ್ಬಾರ ಮಂಟಪಕೆ ಮುದದಿ ॥ ೨೦ ॥

ಬಳಿಕ ಪಲ್ಲಕ್ಕಿಯಿಂದಿಳಿದು ಕರಲಾಘವದಿ । ಕಳೆಯೆತ್ತ ಪೀಠವನಲಂಕರಿಸೆ ಗುರುವರನು ॥ ಗಳಿಲನೆ ನಿಖಿಲ ಸಭಾಸದರು ಕುಳಿತಿರೆ ತದಾಸ್ಥಾನಪಂಡಿತರ ವಕ್ತೃ ॥ ಗಳ ಕಾಲಕುಚಿತವೆನಿಪ ವಿಷಯದ ಭಾಷಣಂ । ಗಳು ಸರಸಗಳೆನಿಸೆ ಗುರುಭಗವತ್ಪಾದವರ ॥ ಗಳ ಬೋಧಸುಧೆಯಿಂದ ತೃಪ್ತರಾಗಿಯಭಿವಂದಿಸಿ ತೆರಳಿದರು ಸಭ್ಯರು ॥ ೨೧ ॥

"ಮರುದಿನದ ಸಮಿತಿಯೊಳರಿಯಲಿಚ್ಛಿಸ ಸಭಾಸ । ದರಿಗುಸುರಿದನಿರಿವೆಯು ಮೊದಲಾನೆಯು ಕಡೆಯಾ ॥ ಗಿರುವಜೀವರುಗಳೊಳು ಮನುಜಜನ್ಮವಧಿಕವಿಹದೊಳಿತರ ಜೀವರುಗಳಾ ॥ ಚರಿಸಿರುವ ಪೂರ್ವಸುಕೃತಾಸುಕೃತಗಳನುಭವಿ । ಪುದು ಮತ್ತೆ ಮನುಜರಂತವುಗಳನು ಧರೆಯೊಳಾ ॥ ಚರಿಸಲಸಮರ್ಥರದರಿಂದಲಸಿಧಾರಾನುಲೇಹನೊಲು ವರ್ತಿಸುವದು" ॥ ೨೨ ॥

ಹಸಿದವರಿಗನ್ನವಿಡಲುಸುರಿಡದೆ ಹಾಡುತೆ ಹ । ರಸುವರಲ್ಲದ ವರುಂಡಗುಳುಗಳಲಿ ಬಿಡದಲೆ ॥ ಮಿಸುಗುತಿರುವಶ್ವಮೇಧ ಫಲ ವುಂಟದರಿಂದಲನ್ನವೀವುದವರಿಗಲ ॥ ಹುಸಿಯುತಾನೆಸೆವ ಸುಕೃ ತವನನಲವರಳಿಯ ಪ । ರಿಸುಡುವದು ಮತ್ತೆ ಹುಸಿಯುವನಂ ಮನುಜರು ವಿ ॥ ಶ್ವಾಸಿಸರದರಿಂದವನು ಜಗದ ಜನರೊಳಿರದೆ ಖಲ ನೆನಿಸಿ ಕೆಡುತಿಹನು ಗಡ ॥ ೨೩ ॥

ನೀರಿನ ತೆರೆಗಳಲಿ ಖಮಣಿಯ ಬಿಂಬದೊಲಿಹ ಶ । ರೀರಗಳೊಳಾತ್ಮರುಗಳುಮನೇಕರೆಂದು ಸಲೆ ॥ ಕೋರಿದರು ಸುವಿಚಾರಿಸಲದೊಂದೆಯಹುದರಿಂದಾತ್ಮಹಿಂಸೆಯನು ಮಾಡ ॥ ಬಾರದದನಾಚರಿಸಲಾತ್ಮಘಾತಜದೋಷ । ವಾರಿಗಾದರು ಬಪ್ಪುದದು ತಪ್ಪದುಶರೀರಿ ॥ ಪಾರವಂ ತನ್ನಂತೆ ಬಿಡದೆ ನೋಡುವವನೀಶ್ವರನನ್ನು ಕಾಣುತಿಹನು ॥ ೨೪ ॥

ಎಡರುಗಳು ತನಗೆ ಬಂದಡರಿದರು ಸಲೆ ಧೈರ್ಯ । ಗೆಡದೆ ಕೈ ಪಿಡಿದಿಹ ಕೆಲಸವನು ಕಲಿತನದಿಂ ॥ ಬಿಡದೆಮಾಡುವನುತ್ತಮ ಪುರುಷನು, ತಾನಾಡಿ ಮಾಡದಿರುವವನಧಮನು ॥ ಪೊಡವಿಯೊಳ ಸದೆನಿಸುವ ಕೋಪಕೆಡೆಗೊಡದಿಹುದು । ಕಡುಲೇಸದನ್ಯಥಾಕಲುಷ ಕೃತಿಯುನವನಿಂ ॥ ಸಡಗರದಿಮಾಡಿಸಿ ಕಡೆಗವನಂ ಯಮಬಾಧೆಗೀಡುಮಾಡುವದೈ ಗಡ ॥ ೨೫ ॥

ನಂಬಿಗೆಯು ನಿಖಿಲಕೃತಿ ಸದ್ಮದಾಧಾರ ಸು । ಸ್ತಂಭವುರೆ ಸಾಂಬಪ್ರಸಾದದಿಂ ಭವಶರಧಿ ॥ ಯಂಬುಪೀರಲು ಕುಂಭಸಂಭವನಿಹುದಪನಂಬಿಕೆ ಜನಕೆ ಭಯಗೊಡುವದು ॥ ಕುಂಭಿನಿಯೊಳು ಬಕುತಿಯು ಶಂಭುವಿನಳುಂಬೊಲೆಮೆ । ಯೆಂಬುವ ಸಸಿಕದಂಬ ಕಾದಂಬಿನಿಯೆನಿಪುದು ॥ ನಂಬಿದವನನ್ನು ಕೈವಲ್ಯ ಕಮಲಾನನೆಯೆಡೆಗೆಳೆದೊಯ್ಯುವ ದೂತಿಯು ॥ ೨೬ ॥

ಎಲೆಕಾಯಿ ಪಂಣುಪೂಗಳ ಭಾರದಿಂದ ಭುವಿ । ಸಲೆಬಾಗಿರುತೆ ತನ್ನೆಡೆಗೆ ದಣಿದುಬಂದು ಮೈ ॥ ಯುಲುಕದಲೆನಿಂದ ಪಥಿಕರನು ಘನ ನೆರಳಿನಿಂದ ಮರವುರೆ ತಣಿಪುವಂತೆ ।॥ ಮಲೆದಿರದೆ ಶಿರಿಭರದಗಂಪಿನಿಂ ನಮ್ರತಾ । ಗಿಳಿಯೊಳಗೆ ನೆಲೆಗಾಣದುಣಬಂದಿರುವತಿಥಿಗೆ ॥ ಸಲೆಯುಣಲು ಕೊಟ್ಟುತಟ್ಟನೆ ಯಥಾಶಕ್ತಿವಿತ್ತಾದಿಯಿಂ ತಣಿಪುದು ಧನಿ ॥ ೨೭ ॥

ಭುಜಗ ಭೂಷಣ ಶಿವಜಟಾತಟನಿಯು ತಟದಿ । ದ್ವಿಜರಾಜನ ಶರೀರದೊಳಿರುವ ವರಸುಧೆಯನು ॥ ಸುಜನರೆ ಪಿಪೀಲಿಕೆಯು ಸುಮದಾಸರದಲೀಂಟಿ ಮನದಣಿಕೆಗೂಡಿದಂತೆ ।॥ ಸುಜನರ ಸಹವಸತಿಸಹಸುವಚನ ಘನತೆಯಿಂ । ರುಜುಬುದ್ಧಿಯಿಂದೆಸಗಿದ ಸುಕೃತವಿಶೇಷದಿಂ ॥ ಕುಜನರಾದವರುರೆ ನಭೋಜನರೆನಿಸಿ ಸಗ್ಗದಿ ನಿಸರ್ಗಸುಖಪಡೆವರು ॥ ೨೮ ॥

ಕೆಟ್ಟಜನರೊಡನಾಟ ಹಾವಿನಹೆಡೆಯಲಿ ಕಾ । ಲಿಟ್ಟಪರಿಯದರಿಂದಲವರ ಬಟ್ಟೆಯನೆ ತವೆ ॥ ಬಿಟ್ಟು ಸಜ್ಜನರ ಕಟ್ಟಳಿಯೊಳಿದ್ದು ಭವದಟ್ಟುಳಿಯ ನೀಗುವದು ನರರು ।॥ ಪುಟ್ಟ ಶಿರಿಯಿದ್ದರೇನಿಷ್ಟೆಂದದರ ಕರಂ । ಗುಟ್ಟು ಹೊರಬೀಳದಿರೆ ಭುವನದೊಳಗದುವೆ ಶತ ।। ಪಟ್ಟಾಗಿತೋರುವದರಿಂದ ಸಂಸಾರಿಯು ರಹಸ್ಯವನುಸುರಬಾರದು ॥ ೨೯ ॥

ಪುಣ್ಯವಂತರೆ ಹೊನ್ನಿನಿಂ ಪರಗತಿಯನೀವ । ಗಣ್ಯಧರ್ಮವನು ಮಾಡಲನುವಾಗುವ ದುಗಡ ॥ ಮೊಂಣಿನಿಂದತಿಥಿಯಭ್ಯಾಗತರನುಣಬಡಿಸಲದರಿಂದ ಪುಣ್ಯವಹುದು ।॥ ಹೆಂಣಿನಿಂ ಸದಪತ್ಯವಾಗೆ ಪುನ್ನರಕಕಳಿ । ದುಂಣುವನಪತ್ಯಸುಖವದರಿಂದಲೀತ್ರಯವು ॥ ಕಂಣಡಿಯನ ಪದಮಂ ಕ್ರಮದಿ ಕೊಡುವದರಿದಾಚರಿಪ ಪುರುಷೋತ್ತಮನಿಗೆ ॥ ೩೦ ॥

ಪರರ ಹೆಚ್ಚಳಿಕೆಯನು ಮೆಚ್ಚದೆ ಬರಿದೆಜಗದಿ । ಜರಿಯು ವದು ಜಾಣತನವಲ್ಲದು ಗುಣವು ಕೌಣ ॥ ಪರದು, ಕಾಣನತೆರದಿ ಪಾರಲೌಕಿಕ ದಾರಿಗಾಣದೆ ಶಲಭನಂಧತ್ವ ॥ ಪರತರುಣಿಯ ವ್ರತ ವಗೆಡಿಪಾಶೆಯೆಂಬ ಪ । ಳ್ಳುರಿಯಲ್ಲಿ ಬಿದ್ದುಕೆಡುವದು ಮನುಜತ ನವಲ್ಲ ॥ ಶರಣುಬಂದವನು ವೈರಿಯಿರಲವನನ್ನು ಪೊರೆವದು ಸುಜ ನರದು ಶೀಲವು ॥ ೩೧ ॥

ಪಾರವಿಲ್ಲದ ಧರಾಮಂಡಲದ ಭಾರವನು । ದಾರ ಸತ್ಯದಲಿ ಶೇಷನು ಶಿರದಿ ಧರಿಸಿಹನು ॥ ಧೀರನಹ ಹರಿಯಾವೆಯಾಕಾರದಲಿ ಬೆನ್ನೊಳಾಶೇಷನನ್ನಿರಿಸಿಹ ॥ ನಾರವಿಯದೊಂದು ಗಾಲಿಯ ತೇ ರಿನೊಳು ಶೂನ್ಯ । ದಾರಿಯೊಳು ನಿತ್ಯಚರಿಪನಿವನಂತಿರುಳಾಣ್ಮ ॥ ತಾರೆಮೊದಲಾದವದರಿಂದ ಸತ್ಯವನು ಬಿಡದೆ ಯಶೋಭರಣರೆನಿ ಸರಿ ॥ ೩೨ ॥

ಯೋಚಿಸಲು ಸಾಮಾನ್ಯಮತ್ತಸಾಮಾನ್ಯವೆಂ । ದಾಚರಿಪ ಧರ್ಮವಿತ್ತೆರವದರೊಳುಸುರಿದೆನು ॥ ಗೋಚರಿಪ ಸಾಮಾನ್ಯವನು ಮುಂದುರೆ ವಿಶೇಷವನು ಪೇಳುವೆನು ಕೇಳ್ಬುದ ॥ ವಾಚ್ಯಚರಿತ ನಹ ಗುರುವುರುದೀಕ್ಷೆಯಿಂದಿತ್ತ । ವಾಚಾಮಗೋಚರಹ ಲಿಂಗಪೂ ಜೆಯನು ಬಿಡ ॥ ದಾಚರಿಸುವದು ಮೂರುಕಾಲಗಳೊಳಥವೇಷ್ಟ ಕಾಲದೊಳು ನರಕೇಸರಿ ॥ ೩೩ ॥

ಕುಡಿವುಂಡುವ ವುಸಿನೋಡುವ ನ್ಯೋಡುವನೊದಲಾ । ದೊ ಡವೆಗಳನು ನರನು ಮೃಡನೆನಿಸುವ ನಿಜಲಿಂಗ ॥ ಕೊಡನರ್ಪಿಸಿಯ ದನುಪಭೋಗಿಸಲುಬೇಕನ್ಯಥಾ ಪಾಪರೂಪಾನ್ನವ ॥ ಬಿಡದುಣ್ಣ ವನುಡುಪತಿ ಶಿರನ ನುತಿಕೇಳದಿಹ । ಮೂಡದಿಹಕೊಡಕೆ ರಸನೆಯು ಪೂಜಿಸದಿಹ ಕೈ ॥ ಪೊಡವಿಯೊಳಪತ್ಯನಿಲ್ಲದ ಬಂಜೆಯೊಲುಬಾಳು ಬಲುನಿರರ್ಥಕವು ನರನ ॥ ೩೪ ॥

ಆಕಾಶದಂತೆ ಸರ್ವವ್ಯಾಪಕವೆನಿಸಿ ನಿ । ರಾಕಾರ ಪರಬ್ರೊ ಮ್ಮವನು ಪಾಲೊಳು ಪಸರಿಸಿ ॥ ತಾ ಕಾಣದಂತಿರುವ ಬೆಂಣೆಯನು ಕಡೆದದನು ಭಾಂಡದೊಳಿಡುವವೊಲು ಶಿರಿ ॥। ಗಾಃಕರನೆನಿಸುವ ಗುರುಸಾರ್ವಭೌಮನುರೆ ಲಿಂ । ಗಾಕಾರ ಶಿಲೆಯೊಳಿಟ್ಟಿದನಂ ಶರೀ ರದೊಲು ॥ ಜೋಕೆಯಿಂ ಕಾಪಾಡು ನೀನೆಂದುಸುರಿ ಮುಕ್ತಿಯಿತ್ತ ವನು ಸಾಮಾನ್ಯನೆ ॥। ೩೫ ॥

ಶ್ರೀಗುರುವಿನ ಮಹೋಪಕಾರವದು ಜಗದೊಳಾ । ವಾಗಲವಿ ಲಾಶ್ರಮಿಗಳಿಗಿರುವದರಿಂದ ಶೈ ॥ ವಾಗಮಜ್ಞನೆನಿಸಿದನಂ ಧ್ಯಾನಿ ಸುತೆ ಪೂಜಿಸುತೆ ಪೊಂದುವದು ಸುಖವನು ॥। ಯೋಗಿವರ ಭವ ರೋಗಪರಿಹರ ಶಿವಬಕುತಿ ಸು । ಭೋಗ ಭಾವಿತ ಸುಖದ ಭೋಗ ವಿಶ್ರುತ ಸಲೆ ॥ ತ್ಯಾಗಿ ಸುವಿರಾಗಿ ಮದಸಂಹಾರಿ ಜಂಗಮನಪಾದವ ನು ಪೂಜಿಸುವದು ॥। ೩೬ ॥।

ವೀರಶೈವನನೇಕ ಜನ್ಮಗಳೊಳರ್ಜಿಸಿದ । ಪಾರಪುಣ್ಯಗ ಳಿಂದಳಿದಘವುಳ್ಳವನಾಗಿ ॥ ಸಾರತರಕೈವಲ್ಯಕಲಧೌತಕುಧರವೇ ರಲಿಕೆ ಸೋಪಾನಗಳೊಲಿ ॥। ಹಾರು ಸ್ಥಲಗಳನಾರೈದುಪಾಸನೆ ಗೈವು । ದಾರ ಭಕ್ತಮಹೇಶಮೊದಲಿಹ ಸುಚರಿತರಾ ॥ ದಾರು ದೇಹಿಂಗಳನ್ನು ಸಂಗ್ರಹದೊಳುಸುರುವೆನು ಕೇಳುವದು ಚಿತ್ತದಿಂದ ॥। ೩೭ ॥।

ಪಿಂಡತಾಪಿಂಡ ವಿಜ್ಞಾನಾದಿ ಪದಿನೈದು । ಖಂಡ ಸ್ಥಲಗಳ ಧರ್ಮಗಳಿಂದ ಮಂಡಿತನು ॥ ಖಂಡ ಪರಶುವಿನ ಭಕ್ತಿವ್ಯಕ್ತನಾ ದಲಿಂಗಿಯು ಭಕ್ತನೆನಿಸುತಿಹನು ॥। ಪಂಡಿತನು ಕೇವಲ ಸಹಜ ದಾನದಿಂ ಬ್ರಹ್ಮ । ಪುಂಡರೀಕಾಕ್ಷಾದಿ ಸುರರ ಭಜಿಸದ ಜಗ ನ್ಮಂಡಲದಿ ಶಿವನಧಿಕನೆಂಬ ಭಕ್ತನು ಭಕ್ತ್ಯತಿಶಯದಿಂ ಮಾಹೇ ಶನು ॥। ೩೮ ॥।

ಲಿಂಗನಿಷ್ಠಾದಿಯಿಂ ಕಳೆದಕಲ್ಮಷನಾದ । ಭಂಗುರಾದ ಪ್ರ
ಸಾದಾದಿ ಸಪ್ತ ಸ್ಥಲಗ ॥ ಳಂಗವಾಗುಳ್ಳಂಗಜನುರುಹಿದ ಗಂಗಾ
ಧರನನು ಬಿಟ್ಟನ್ಯದೇವ ॥। ರಂ ಗಣಿಸದಿಹ ಕೇವಲ ನಿಜೇಷ್ಟ
ಲಿಂಗದೊಳು । ಮಂಗಲ ಸುಭಾವವುಳ್ಳಿದ ನಶ್ವರಹ ವಿಶ್ವ ॥
ಲಿಂಗಾತ್ಮಕವಿಹುದೆಂದು ತಿಳಿದಿಹ ಮಾಹೇಶ್ವರ ಪ್ರಸಾದಿಯೆನಿಸು
ವನು ॥। ೩೯ ॥।

ಭಕ್ತಮಾಹೇಶ ಪ್ರಸಾದಿ ಸ್ಥಲಗಳಿವು । ವ್ಯಕ್ತವಹ ಕ
ರ್ಮಪ್ರಧಾನಗಳಿಹವುಳಿದವು ॥ ಸೂಕ್ತವಿಜ್ಞಾನ ಘನಗಳವುಗ
ಳಲಿಷ್ಟಲಿಂಗವು ಪರಬ್ರಹ್ಮವದು ತ ॥ ಚ್ಛಕ್ತಿಯು ಪ್ರಾಣವು
ಭಯಾತ್ಮಕವೆ ಲಿಂಗವೆಂ । ಬುಕ್ತಿಯ ದೃಢಜ್ಞಾನವುಳ್ಳವ ಸ್ವಸ್ಥ
ಲಕೆ ॥ ಸೂಕ್ತಸ್ಥಲಗಳ್ಳೆದರೊಡಗೂಡಿರೆ ಪ್ರಾಣಲಿಂಗಿಯೆನಿಸುವನು
ಜಗದಿ ॥। ೪೦ ॥।

ಪ್ರಾಣಲಿಂಗಾರ್ಚನ ಸುಭಾವಧರ್ಮವನು ಸಲೆ । ಮಾಣದಾ
ಚರಿಸುವ, ಜ್ಞಾನರೂಪ ಶಿವನು ॥ ಪ್ರಾಣಪತಿ ತಾನು ಸತಿಯೆಂದು
ಭಯುರುರು ಮೇಳದಿಂದಾಗುವ ಸುಖವನ್ನು ॥। ಜಾಣತನದಿಂದನು
ಭವಿಸ ಶರಣ ಮೊದಲಾಗಿ । ಕಾಣುತಿಹ ನಾಲ್ಕು ಸ್ಥಲಗಳಂಗವಾಗು
ಳ್ಳ ॥ ಕೇಣವಿಲ್ಲದ ಭಕ್ತಿಭೂಷಿತ ಪ್ರಾಣಲಿಂಗಿಯು ಶರಣನೆನಿಸುತಿ
ಹನು ॥। ೪೧ ॥।

ಪ್ರಾಣಲಿಂಗದಯೋಗದಿಂದಖಂಡ ಸುಖವನು । ಮಾಣವನು
ಭವಿಪ ವಿಷಯಾತ್ತ ಸುಖವನೆಣಿಸದ ॥ ಕೇಣವಿಲ್ಲದೊದಗುತಿರುವ
ಶಿವಾನಂದಪಾಥೋಧಿ ಮಜ್ಜನ ಸುಮಹಿತ ॥। ಕಾಣುತಿಹ ಜಗವ
ಮಾಯಾಕಲ್ಪಿತವೆನದ ಶಿ । ವಾಣತೆಯಲೊದಗಿದನನುಭವಿಸುವ
ಭಕ್ತಿತತ ॥ ಜಾಣನಾಗಿಹ ಶರಣನೈಕ್ಯಾದಿ ನಾಲ್ಕುಸ್ಥಲಯುತನೈಕ್ಯ
ನೆನಿಸುವನು ॥। ೪೨ ॥।

ಕರಪೀಠದಲಿ ಪೂಜೆ, ಪುಷ್ಪವದ್ಭುನ್ನಿ ನಯು । ಸ ರಮಣೀಯ ನಿಜೇಷ್ಟಲಿಂಗದಿ ಮನವು, ಭಾಲ ॥ ದಿರಿವಿನೊಳಿರಿಸಿದ ಭಸಿತದ ಘನವು, ಗಲದೊಳು ಶಿವಾಕ್ಷಸರ, ಮುಖಕಮಲದಿ ॥ ಪರಮಶಿವ ಪಂಚಾಕ್ಷರವು, ಹರನಸೇವೆಯಲಿ । ನುರಿತತನುವು, ಭವಹರಣಚಣ ಭಕ್ತಿಯಿವುಗಳ ॥ ಭರಭರಿತನಾಗಿರುವ ವೀರಶೈವನಿಗಾರು ಸಾಟಿಯುಪ್ಪರೊಳರೆ ಭುವಿ ॥ ೪೩ ॥

ಇದರಂತಲಾಚರಿಸಿ ಧನ್ಯರಾಗುವದಿಹದಿ । ಮೊದಲಿನಗೆಲಸ ವೀರಶೈವನದಿದನ್ನುಳಿದು ॥ ಹದವಿಲ್ಲದನ್ಯ ಕರ್ಮಾಪನಾಸಕ್ತಿಯಿಂದಮಾಡೆ ಅದುವು ಮೃಗಜಲಕೋ ॥ ಡಿದ ಮೃಗದೊಲು ವ್ಯರ್ಥವೆಂದು ಬೋಧಿಸುವ ಗುರು । ಪದವನಭಿವಂದಿಸುತ ಮುದವಿಳುಹಿಸಲಾಗ ॥ ಸದಯನದನಂ ಬಿಟ್ಟತರ ಪಟ್ಟಣವನು ರವಿಯು ನ್ಯರಾಶಿಯೊಲ್ಯೆದಿದ ॥ ೪೪ ॥

ಸಡಗರದಲಿ ಪ್ರಾರ್ಥಿಸುವ ಜನಗಳ ಬಯಕೆಯ । ನೊಡಗೂಡಿಸಲು ಭೂಮ್ರುಡನಹ ಸಂಯಮಿವರನು ॥ ಹಡಗಲಿಯ ತಾಲೂಕಿನೊಳಿಹ ಹಿರೆಹಡಗಲಿಯನು ಪಟುಪಟಹಾದಿವಾದ್ಯ ॥ ಬಿಡದೆ ಭೋರ್ಗರೆಯುತಿರೆ ವಂದಿಗಳ ಮುಂಪರವ । ದೊಡನೆ ಮುಂದರಿದು ನುತಿಸುತ್ತಿರೆ ಗುರುಬಕುತರ ॥ ಗಡಣದುರು ಜಯರವವು ಪೋಷ್ಯೈಪೊಕ್ಕನು ಪೊನ್ನಿನಂದಣ ಮೆರವಣಿಗೆಯಲಿ ॥ ೪೫ ॥

ವಿದ್ಯೆಯುರೆ ಹೆಚ್ಚಳಿಕೆಯುದ್ದೇಶಿಸಿ ಧನವಿ । ತ್ತುದ್ಧರಿಸಲು ಸಮಾಜವನುರು ಬದ್ಧಕಟಿಯೆನಿ ॥ ಸಿದ್ಧ ಸುಸ್ಥಿರಪಟ್ಟದ ಯುವಗುರುವಿನ ಶಿವೈಕ್ಯದ ಸುದ್ದಿಕೇಳಿ ಶಿರದಿ ॥ ಬಿದ್ದಪರಿಯಾಗೆ ಗಿರಿಚಣಹೊತ್ತು ಮುಗ್ಧತನ । ದಿದ್ದಹೊಘುಟೀಯಂತ್ರದಂತೆ ಜಗದಾಟವೆಂ ॥ ದೆದ್ದು ಮೊದಲಂತಿದ್ದನು ಮುನಿ, ರವಿಯ ಮುಸುಗಿದ ಮೋಡ ವೋಡದುಳಿಯುವದೆ ॥ ೪೬ ॥

॥ ಶ್ರೀ ಜಗದ್ಗುರು ಪಂಡಿತಾರಾಧ್ಯಾಯ ನಮಃ ॥



ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
ಶ್ರೀ ೧೦೦೮ ಜಗದ್ಗುರು
ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ
ಮಹಾಸ್ವಾಮಿಗಳು.

ಒಂದುತೆರವಲ್ಲದೆಡರುಗಳ ಗೊಂದಲವನ್ನು । ತಂದೊಡ್ಡಿ ಪೂರ್ವದ ಮುದಿಯ ಗುರುಗಳು ಪರಿಪರಿ ॥ ಯಿಂದಕಾಡುತಿರೆ ಬೆಚ್ಚದೆ ಬೆದರದಚ್ಚುಳಿಟ್ಟಿಸ ಸದಾಚಾರದ ಬಲ ॥ ದಿಂದವುಗಳನು ನುಚ್ಚುನುಚ್ಚಾಗಿ ಮಾಡೆಯುವ । ರಂದವದು ಮಂದಿಯರಿವಂತಾಗಲು ಮತಕ್ಕೆ ॥ ಸಂದಧಿಕ ಸಾಲವನು ಕಳೆದು ಹರುಸಂ ದಳೆದು ಹೊಳೆದನಿಳಿಯೊಳು ಯೋಗಿಯು ॥ ೪೭ ॥

ಒಮ್ಮೆ ಯುಲಗಿಲವಾಡದೊಳು ಪರಮಗುರುವಿರಲು । ತಮ್ಮಯಾಸ್ಥಾನಬುಧನು ಮಚಿಗಿಯ ಶಂಕರನ ॥ ಸಮ್ಮುಖದೆ ವಾಗೀಶನೆಂಬ ವಟುವನು ಕರೆಸಿ ಮುಖಹಸ್ತಪಾದಗಳನು ॥ ಸಮ್ಮುದದೆ ನೋಡಿ ಗುರುಲಕ್ಷಣಾಂಚಿತನೀತ । ನೆಮ್ಮಸರಿ ಗದ್ದುಗೆಯನೇರುವನು ವಿಬುಧ ಜನ ॥ ಸಮ್ಮಾನವಂ ಪೊಂದಿಮೆರೆವನು ಶ್ರೀಶೈಲದೊಡೆಯನಿವನಪ್ಪನೆಂದು ॥ ೪೮ ॥

ನೆಮ್ಮದಿಯಮಾತುಗಳನಪ್ಪಣೆಯ ಕೊಡಿಸುತಲಿ । ತಮ್ಮೊಡನೆ ಸಂಚಾರಕಂ ಕರೆದು ಬಾರ್ಶಿಗಂ ॥ ಗಮ್ಮನೇಪಯಣಿಸಿ ಶ್ರೀಗಿರಿಯ ಗುರುವಿರುವ ಗುಂತಕಲ್ಲಿಗೆ ಸಾರ್ದನು ॥ ತಮ್ಮತನ್ಮೊಳ ಮಾತುಮುಗಿಯಲ್ಕೆ ವಾಗೀಶ । ಸುಮ್ಮನಿರದೆದ್ದು ಕೈಮುಗಿದು ಗುರುವರ್ಯರೇ ॥ ನಮ್ಮಾಮುದೇನೂರ ಹಿರಿಮಠವೆಸಾಕೆನಗೆ ತಮ್ಮುಭಯ ಸನ್ನಿಧಿಗಳ ॥ ೪೯ ॥

ಸಮ್ಮೊಹನಾಂಘ್ರಿಯುಗ ಪೂಜೆಯಿಂ ಧನ್ಯನಾಂ । ನಿಮ್ಮೀರ್ವರಂ ಬೇಡ್ವೆನೆನ್ನ ವಿದ್ಯಾಭ್ಯಾಸ ॥ ಕಿಮ್ಮಡಿಯನಿಪ್ಪವರವೊಂದನಾಶೀರ್ವದಿಸಿ ಕಳುಹುವುದು ಕಾಶಿಗೆನ್ನ ॥ ಹೆಮ್ಮೆಮಾತಲ್ಲ ನಾಂ ಯಾಚಿಪುದು ಗುರುಯುಗವೆ । ನಿಮ್ಮ ಪೀಠದ ಸೇವೆಮಾಡಲಸಮರ್ಥನಿಹೆ ॥ 'ನೊಮ್ಮತದೆ ಹರಸಿದರೆ ವಿದ್ವತ್ತು ಫಲಿಸಿದರೆ ಸೇವೆಗಾಂ ಸಿದ್ಧನೆನಲು ॥ ೫೦ ॥

ಬರುಬರುತ ದಾರಿಯೊಳು ರಾಮಪುರದೊಳಗಿಳಿದ । ಗುರುಸಾರ್ವಭೌಮನಡಿದಾವರೆಗೆ ಸಾಷ್ಟಾಂಗ ॥ ವೆರಗಿ ಧರೆಯ ಸುಧಾಕರ ಶಿರೋಧರ ಮಹಿಮಾಕರ ಮಾಕರನೆ ಖಲಶಭೀ ॥। ಕರನೆ ಯನ್ನನು ಮರಿಯದುದ್ಧರಿಪುದೆಂದು ಪರಿ । ಪರಿಯಿಂದ ಬಿನ್ನೈಪನಂ ಬಿಡದ ಲೆಬ್ಬಿಸುತ ॥ ಕರುಣೆಯಿಂ ನೀನಾರು ಬಂದುದೇಕೆಂದುಕೇಳ್ವ ಮುನಿಗಿಂತೆಂದನವನು ॥। ೭೯ ॥।

ಬೊಮ್ಮರಕ್ಕಸವೆಂಬ ಬಲವಾದ ಭೂತವದು । ಕೆಮ್ಮನೆನ್ನಯ ಸತಿಯಮೈಯೊಳಗೆ ಸೇರಿರುಳು ॥ ಗಮ್ಮನೆ ಕೆಣಕೆ ನಿದ್ದೆ ಸುದ್ದಿಲ್ಲವುರು ದುಃಖದನಿಲುಕಿಲ್ಲವು ದಣುವಿಗೆ ॥। ದನ್ನಿಮಿಲ್ಲವು ವರಿಸದನೇಲಾಯಿತು ಮಹಿಮನೆ । ನಿಮ್ಮಯ ಚರಣಕಮಲ ಯುಗಲವನು ನೆನ್ನಿರುವೆ ॥ ಸಮ್ಮತಿಸಿಯದರಿಂದ ಪಾರುಮಾಡವಳನೆಂದುರೆ ಬೇಡಿಕೊಳ್ಳುವನನು ॥। ೬೦ ॥।

ನೋಡಿ ದಯೆಗೂಡಿ ಯಲೊ ತಲ್ಲಣಿಸಬೇಡೆಮ್ಮ । ಕೂಡಕೆಲ ದಿನವಿದ್ದರೊಳಿತಾಗುವದು ಚಿಂತೆ ॥ ಬೇಡವೆಂದಭಿಮಂತ್ರಿಸಿ ಭಸಿತವನಿತ್ತದನನು ಮಡಿಯಿಂ ಮೈಗೆ ಬಕುತಿ ॥। ಗೂಡಿ ಲೇಪಿಸಿ ಬಾಯೊಳಿನಿತಿಟ್ಟು ಸೇವಿಸುತೆ । ಪಾಡುತಲನುದಿನಮೀಶ್ವರನನು ಪಲ ದಿನಮಿರೆ ॥ ಪಾಡೆನಿಪುದು ನಿಜವೆಂದಭಯವಿತ್ತು ಪರಸಿದನು ತಪಸಿತವೆ ಕೃಪೆಯಿಂದ ॥। ೬೧ ॥।

ಸಾಯಂತನ ಸ್ನಾನಮಾಡಿ ವಿಶ್ವಾಸದಿಂ । ದಾಯತಾಂಬಿಯು ಜಲಸಮ್ಮಿಶ್ರಿತ ಭಸಿತವ ॥ ಕಾಯಕ್ಕೆಲೇಪಿಸಿ ಯುಳಿದುದನಂ ಸೇವಿಸಿ ಶಯನತಲದೊಳೊರಗಿ ಮನದಿ ॥। ಕಾಯಜಾರಿಯ ನೆನೆದು ಮುಂಜಾವಿನೊಳಗೆದ್ದು । ಹಾಯೆನುತೆ ಸುಖಸುಪ್ತಿಯಂ ಮುದದಿ ತನ್ನ ಪತಿ ॥ ರಾಯನಿಗೆ ಸಾದ್ಯಂತಮುದಹರಿಸಲಾತನುಕ್ಕೇರುವ ಕ್ಕರದಿ ಬಂದು ॥। ೬೨ ॥।

ಕಾಲವರಿತು ಕಲಿನಾಶಕನ ಪದಕಮಲಯುಗ । ಕಾಲಸ್ಯವಿಲ್ಲ ದಷ್ಟಾಂಗದಿಂದಲೆರಗಿ ದ ॥ ಯಾಲವಾಲನ ಕಟಾಕ್ಷದ ಕೊನೆಸನ್ನಿಯಲಿ ಕುಳಿತು ಕರಮುಗಿದು ಶ್ರೀಗುರೊ ॥। ಆಲಿಪುದು ನಿನ್ನಮಹಿಮೆಯನು ಸುರಲಾರಳವು । ಖೂಳಭೂತವದಡವಿಪಾಲಾದ್ದುದು ನೆರೆನಾ ॥ ಬಾಳಿದೆನು ಸತಿಸಹಿತ ಸುಖದಿ ನಿನ್ನೊಳಗನೆನಿಸಿ ಭೂವಳಯದೊಳಗೆ ನಾ ॥। ೬೩ ॥।

ಗುರುವೆನಿನ್ನಯ ದಯಾಭರಿತದೃಷ್ಟಿಯು ಬಿದ್ದ । ಕೊರಡು ಕೊನರುವದು ಬರಡದು ಹೈನದಾಗುವದು ॥ ಕುರುಡನುರೆ ಕಣ್ಣುಳ್ಳವನೆನಿಪನುರುದರಿದ್ರನು ಧನಿಕನಹನು ಪರುಷದ ॥। ಪರಿಶದಿಂ ಕಬ್ಬಿಣವು ಕನಕವಾದಂತೆ ಪರ । ತರ ನಿನ್ನಯುಪದೇಶದಿಂ ಜರಿದು ಜೀವತನ ॥ ಬೆರೆದು ಬೊಮ್ಮನೊಳೊಂದುಗೂಡುವನು ನರನೆಂದೊಡೇಂ ಗುರುವರನ ಮಹಿಮೆಯೊ ॥। ೬೪ ॥।

ಶರಣಾಗತಪರಿಪಾಲನೆ ಭಕ್ತಿಲೋಲನೆ ಸು । ಕರುಣಾಕಲಿತ ಕಟಾಕ್ಷನೆ ಹರಮುನಿದರೆ ಗುರು ॥ ನೆರೆಕಾಯ್ವ ಗುರುಮುನಿದರೆ ಹರಕಾಯನದರಿಂ ನಗುರೋರಧಿಕಮೆಂಬುವ ॥। ವರವೇದಪುರುಷನ ವಚನವು ಚಂದ್ರನೊಳು ಚಂ । ದಿರತನವು ಹೇಗೊ ಹಾಗೆಯೆ ನಿನ್ನೊಳು ಯಥಾರ್ಥ ॥ ಯಿರುವದಾರ್ಕೈಯೆ ಜಗದಾಚಾರ್ಯಶೇಖರ ಪೊರೆಯುವದೆನ್ನನಿದರಂತೆ ॥। ೬೫ ॥।

ಎಂದವನಂದಾನಂದತುಂದಿಲನೆನಿಪ ಧನಿಕ । ನಂದು ವಿಜ್ಞಾನಘನವರನ ಪದಪದ್ಮಕಭಿ ॥ ವಂದಿಸಿಯೆ ಸುಂದರಿಯಗೂಡಿ ತನ್ನೂರುದಾರಿಯನೇರಿದನು ಬಳಿಕ ಸು ॥। ಬಂಧು ಸುಖಸಿಂಧು ನಿಜಪಡಿಯೊಡನೆ ಪಯಣಗತಿ । ಯಿಂದಜಗವಂ ಪಾವನವಮಾಡುತ ಗುರುವರ ॥ ಬಂದನು ನಿಜಮಠಕೆ ಚರಮಕುಧರಕರವಿಂದ ಸಖನಂತೆ ವಿಬುಧರರಿಯೆ ॥। ೬೬ ॥।

ಉದಯದಿಂ ಹಿಮನಗವನಮರವರನನ್ನು ಮಾ । ಡಿ ದಯೆ
ಯಿಂ ಕೈಪಿಡಿದುರೆಕಪಾಲಿಯಂ ನಿತ್ಯ ॥ ಪದವೀವನಂ ಗೆಯ್ಯುತಾನೆ
ಮೊಗನಂ ಜಗದಿ ಮಂಗಲದ ಮೂರ್ತಿಯೆನಿಸಿ ॥। ಮದವಾಂತ
ಗೊಂದೆಯಂ ಭುವನವಂದ್ಯತ್ವದಿಂ । ಪಡೆದು ಜೋಡಿಸಿಯುಭಯ
ಕುಲದೊನತನವ ಗಳೆ ॥ ದದನನ್ನು ಪಾವನಗೊಳಿಸಿ ಹೊಳೆಸಿದ ಕೃ
ಪಾವತಿಯು ಪಾರ್ವತಿಯು ಪೊರೆಯುಗೆ ॥। ೬೭ ॥।

ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳು
ಐದನೆಯ ಸಂಧಿ ಪದಂ ೬೭ ಕ್ಕಂ
ಮಂಗಲಮಸ್ತು.







## — ಆರನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ— ಅನ್ಯರಿಂದುಂಟಾದ ಗುರುತನದ ಹೈನ್ಯಮಂ ।
ಶೂನ್ಯವನ್ನಾಗಿ ಮಾಡುವುಪಾಯವನರಿಯಲು ॥
ಮಾನ್ಯಮಣಿ ಕಾಶಿಯೊಳು ಪರಮಪಂಚಾಚಾರ್ಯ
ಸಮಿತಿಯನು ಕರೆಯಿಸಿದನು ॥೦॥

ಕಂಣುಬೇನೆಕಳೆಯಲು ವನಚರನೊದಗಿಸಿರುವ । ಸಣ್ಣಪುಟ್ಟೌಷಧವು ಬರಿದಾಗಲಾಗವನು ॥ ತಂಣಗಾಗದೆ ತನ್ನ ಕಂಣನಾಕಂಣಿಗಿಡೆ ಚನ್ನಾಗೆ, ಮತ್ತೆರಡನೆ ॥। ಕಣ್ಣನೊಸರಿನ ಕಂಪೆಯೊಲು ಪಿಚ್ಚುಗುತಿರೆ ಕಂ । ಡಂಣೆದೆಯನಾಗದೆರೆಡನೆ ಕಂಣಿಡುತಿರೆ ಮು ॥ ಕ್ಕಂಣನೊಲೆದೊಕ್ಕಂಣಿಗವಗೆ ಮುಕ್ಕಂಣಗಳನಿತ್ತ ಶಿವನೆ ಸಲಹಯ್ಯ ॥ ೧ ॥

ಶಿವಸಮಯ ಸಂಸ್ಕೃತಿಸುಖವನಸಮನಾಗಿಯನು । ಭವಿಪ ಭೂಕೈಲಾಸ ಗಿರಿಯೆನಿಪ ಸಂಸ್ಥಾನ ॥ ಭವುಕಮಠದೊಳು ಸತ್ಕಥಾಲಾಪಕಾಸಾರಸಾರ ಸಾರಸಮರಾಲ ॥। ಯುವಕನಾದ ಯಮಿವರನೊಂದುದಿನ ಮಾನಸದೊ। ಳವನೀಂದುಶೇಖರರೆನಿಸುವ ಗುರುವಂಶಜರು ॥ ಭುವನದೊಳವನತಿಗಿಳಿದ ಸ್ಥಿತಿಯೊಳಿರುವರದನು ಕಂಡು ಕಡುನೊಂದನು ॥ ೨ ॥

ನಗರಿಯೆಂಬುವ ವಾರಿಜಾಕ್ಷಿ ತೊಳೆದೊಣಹಾಕಿ । ದಗಣಿತ ಚೆಲೆಯದುಕೂಲವಿದೇನೆನೆ ತತ ಹಿಮ ॥ ನಗದಿಂದೊಗೆದ ನಿಮ್ನಗೆಯು ತನ್ನೊಳು ಮುಳಗಿರ್ದವಯುವಿಗಳ ಸಮುದಾಯು ॥। ದಘನಿಕರವನ ಪಹರಿಸುತ್ತೆ ಹರಿಯುವದೆಲ್ಲಿ । ಸೊಗಯಿಪ ಸುರಾಲಯ ಶಿಖರ ಘರ್ಷಣಕೆ ಹರಿದ ॥ ಸಗ್ಗದಿಂ ಬಿದ್ದುದರ ಸಂಪದವೆನೆ ಮಣಿಕಾರರ ವಿಪಣಿಗಳು ತೋರ್ಪವು ॥। ೧೧ ॥।

ಭಾರತದ ಭುವಿಯೊಳಿರುವ ಕ್ಷೇತ್ರಗಳೊಳಗಿದು । ದಾರವಾದುದರಿಂ ಚತುರ್ಮುಖನ ಪುರಕಿಂತ ॥ ಸಾರತರ ಸುಕೃತವುಳ್ಳುದೆನುತಿದು ಪಂಚಾನನ ಶಿವನಿರುವಿಕೆಯಿಂದಲ ॥। ಪಾರಮಹಿಮೆಗಳಿಗಾಧಾರ ವೆಂದರಿದಂತೆ । ಶಾರದೆಯು ಸತ್ಯಲೋಕವನು ಬಿಟ್ಟಲ್ಲಿ ಸಮ ॥ ಯೂರಳಾಗಿರುತಿರುವಳಾದ್ದರಿಂದಿಲ್ಲಿ ನರರೆಲ್ಲ ಕೋವಿದರಿರುವರು ॥। ೧೨ ॥।

ಕೈಲಾಸಗಿರಿಯೊಳಿರುವದನುಳಿದು ಶಿವನು ಭೂ । ಕೈಲಾಸವೆನಿಸುತಿಹ ಕಾಶಿಕಾನಗರದೋ ॥ ಳುಲ್ಲಾಸದಿಂ ವಿಶ್ವನಾಥನೆಂಬುವ ಲಿಂಗರೂಪದಿಂದಿದ್ದು ಭಕ್ತ ॥। ರೆಲ್ಲ ಬಯಕೆಯ ನೀಡುತಿಹನದರಂತೆ ಶಿವೆ । ಯಲ್ಲಿರದಲಿಲ್ಲೆಗೈದನ್ನಪೂರ್ಣೆಯನುತಿಹ ॥ ಸಲ್ಲಲಿತ ನಾಮವಾಂತು ಪದಪಲ್ಲವಕೆರಗುವ ಭಜಕರನೊರೆಯುತಿಹಳು ॥। ೧೩ ॥।

ಅಂತೆಸೆವ ವಾರಾಣಸೀನಗರಿಗೈತಂದ । ಕಾಂತುಸಂಹರವಮುಖೋದ್ಭೂತಾರ್ಯ ದೇಶಿಕರ ॥ ನಂತೆದುರ್ಗೊಂಡುಪಚರಿಸೆ ಸುಂದರಂದಣಂಗಳನೇರಲುರೆ ಮುಂದೆಸೆ ॥। ವಂತ ವೈದಿಕರ ವೇದದ ಘೋಷವಾಗೆ ಕಕು । ಭಂತವನು ಭೇದಿಸುವ ಪಟಹಾದಿ ವಾದ್ಯಗಳ ॥ ದಂತುರಧ್ವನಿಯು ಭೂಗಗನವ ವ್ಯಾಪಿಸಲುವಾಂದಿ ಜನರು ಪೊಗಳುತ್ತಿರೆ ॥। ೧೪ ॥।

ಐಬಂಣದ ಪತಾಕೆಯ ಪಟವಾಗಸದಿ ಚರಿ । ಪಾಬೆವತ ಬಿಸಿ ಗದಿರನಿಗೆ ಬೀಸುವಂತೆ ನೆರೆ ॥ ಶೋಭಿಸಿಯಲಿದಲಿದಾಡೆ, ಸುಚಾ ಮರಗಳು ಬಾಂದಳದೋಳೀರಿಳಿದಾಡುತಿ ।॥ ಹಾಬಿದಿಯ ಪದುಳ ದಂಚೆಗಳೀನೆನೆ ಜನರಿಂ । ಸಾಭಿನಯ ಡಾಳಿಸಲ್ಪಡುತಿರಲು ಸಲೆ ಮುತ್ತಿ ॥ ನಾಬೆಕೊಡ್ಗೆಯು ಪಗಲು ವಿಧುವಿದ್ಧರವನಂ ಜರಿವ ಹೊಳಪಿನಿಂ ಹೊಳೆದುದು ।॥ ೧೫ ।॥

ಸುಂದರಗಳಾದ ಪೂಪಲ್ಲವಗಳಿಂ ಭರಿತ । ಹಂದರಗಳಿಂ ಸಾರ ಸಾರಣೆಗಳಿಂದಲೂ ॥ ಚಂದವಹರಂಗವಲ್ಲಿಗಳಿಂ ಧ್ವಜಗಳಿಂದ ಲಂಕೃತ ನಗರಮಾರ್ಗದಿ ।॥ ಬಂದುದುತ್ಸವವು ಪಾಂಡುರಭಸ್ಮ ಪುಂಡ್ರಂಗ । ಳಿಂದೊಪ್ಪುವ ಲಲಾಟತಟದ ರುದ್ರಾಕ್ಷಗಲ ॥ ಬಂಧುರ ಕಮಂಡಲುರು ದಂಡಗೈಯ್ಯಹ ಪಟ್ಟದಾಚಾರ್ಯರೆಸೆಯೆ ಮುಂದೆ ।॥ ೧೬ ।॥

ಕುಂಡಗಳ ಮೂರರೊಳು ಪೊಗೆಯಿಲ್ಲದುರಿವ ಪ್ರ । ಚಂಡಾ ನಲತ್ರಯದೊಲಂದಣತ್ರಯದೊಳಗೆ ॥ ಮಂಡಿಸಿದ ಖಂಡತೇ ಜೋಮಂಡನ ಸುಮಂಡಿತ ಜಗದ್ಗುರು ತ್ರಯುವನು ।॥ ಕಂಡು ಕೈದಾವರೆಗಳ ಯುಗಲಗಳನು ತಮ್ಮ । ಮಂಡೆಗಳ ಮೇಲಿಟ್ಟು ದೇವಾ ಸ್ವಸಂಸಾರ ॥ ದಂಡಲಿಯು ಹರಿದು ಹೋದುದೆನುತ ಸುಭಾ ವಿಕರು ಕೊಂಡಾಡಿದರು ಮುದದಲಿ ।॥ ೧೭ ।॥

ಮುಡಿಯಿಂ ಮಯೂರತ್ವವ ಮುಖದಿಂ ವಿಧುತನವ । ನಡೆ ಯಿಡುವಿಕೆಯಲಿ ಅಂಚೆತನವನು ನಯನದಿಂ ॥ ದೊಡನೆ ಮತ್ಸ್ಯ ತ್ವವ ನಡುವಿನಿಂ ಹರಿತನವನು ಮನಸಿಜನ ಜನಿಯಿಂದಲಿ ।॥ ಬಿಡ ದೆ ಬರುವಮುರತ್ವವನಳವಡೆ ಬಹುರೂಪ । ವೊಡಲೊಳಿರುವ ವಿರಾ ಡನಂತುಡುಪತಿಮುಖಿಯರ ॥ ಗಡಣವು ಕಟಾಕ್ಷಕಶೆಯಿಂದ ಯುವ ಮೃಗಗಳಂ ಪೊಡೆಯುತ್ತೈತಂದಿತಾಗ ।॥ ೧೮ ।॥

ಸಾರತರ ಕಚಕಲಾಪವದು ಕರಿಮೋಡಾಗೆ । ತೋರತುರುಬಿನಲಿ ಕೆಲಬಂಣದ ಸುಮದಸಂಣ ॥ ಹಾರವು ಸುರಧನುವಿರೆ ಯೋಗಂಹೊಟೆವದು ಬಳ್ಳಿಮಿಂಚಾಗೆ ಪರಮ ।॥ ಚಾರು ಚರಿತರಮೇಲೆ ತೂರುವಾಲಾಜಗಳ । ಪಾರವೃಷ್ಟಿಯದಾಗೆ ಕಾರಗಾಲದೊಲು ಸುಮ ॥ ನೋರಮೆಯರೆನಿಸುತಿಹ ಕಳೆವೆತ್ತ ಪೆಣ್ಮಣಿಗಳ್ಳೈದೀಕ್ಷಿಸಿದರು ಮುದದಿ ।॥ ೧೯ ।॥

ಈತೆರದ ಪುರವರದ ಮುಖ್ಯವೀಥಿಗಳಲ್ಲಿ । ಸಾತಿಶಯವಾಗಿ ಮೆರೆಯುತ ಮಹೋತ್ಸವವದು ಮ ॥ ತಾತಿಸನ್ನಿಧಿಗೆ ಬರೆ ಶಾಶ್ವತಯಶೋರಾಶಿರಂಜಿತ ಹರಿದ್ವಲಯ ಮ ।॥ ಹಾತಪೋಧನನು ಶಿವಲಿಂಗಗುರುವರನು ಮೋ । ದಾತಿರೇಕದೊಳು ಹೆಬ್ಬಾಗಿಲಿಗೆಬಂದು ಶಿವ ॥ ತಾತಿಗಳಹಾಚಾರ್ಯರನುಪಚರಿಸಿ ನಯದಿಂ ಕರೆದೊಯ್ದನಾಸ್ಥಾನಕೆ ।॥ ೨೦ ।॥

ಭಾಸುರ ಸಭಾಸ್ಥಾನದೊಳತಿ ಲೇಸೆನಿಸುತಿರು । ವಾಸನದ ಮೇಲ್ಭಾಗದೊಳಧಿಕೋನ್ನತ ಸುಸಿಂ ॥ ಹಾಸನಗಳು ಚತುಃಶಿಖರದ ಶೃಂಗಗಳಲೊಪ್ಪೆ ವಿಪಶ್ಚಿದಗ್ರಸರರು ।॥ ಭಾಷಣಬೃಹಸ್ಪತಿಗಳು ಪಪೀಠಗಳಧಿಪರು । ಧೇಶದೇಶಗಳಿಂದ ಬಂದಿರುವ ವೀರಶೈ ॥ ವೇಶ್ವರರು ಕಾಶಿಕಾಪುರಪತಿ ಮೊದಲೆನಿಪ ಸಭಿಕರುಚಿತವಿಷ್ಟರದಿರೆ ।॥ ೨೧ ।॥

ರಂಭಾಪುರೀ ವೀರಸಿಂಹಾಸನಾಧಿಪನು । ಶಂಭುವಹ ಸದ್ಧರ್ಮ ಸಿಂಹಪೀಠೇಶ್ವರನು ॥ ನಂಬಿದರಿಗಿಂಬು ಸಿರಿಗಿರಿಯ ಸಿಂಹಾಸನಾಲಂಕಾರಿಯು ಕುವಲಯದ ।॥ ಸ್ತಾಂಬನು ಜ್ಞಾನಸಿಂಹಾಸನೇಶ್ವರನು ವಿ । ಶ್ವಂಭರೆಯುರುಗುರುಗಳು ದಯೆಮಾಡಿಸುವರೀಗ ॥ ಳೆಂಬ ಸೂಚನೆಯಿಂ ಜಯರವದಿಂದರಿದೆದ್ದು ವಂದಿಸಿದರುರೆ ಸಭಿಕರು ।॥ ೨೨ ।॥

ಹೈಮಗಿರಿ ಶಿಖರಗಳನು ಗಜವೈರಿಗಳೊಲಬ್ಧಿ। ರಾಮಸಿಂಹಾಸನಗಳಂ ಜಗದ್ಗುರು ಸಾರ್ವ ॥ ಭೌಮರವರು ತವೆಮುಂಡಿಸೆ ಸಭೆಯೆಗೆಲಸಮಾರಂಭಿಸಲ್ಪಟ್ಟಿತಾಗ ॥। ಭೂಮಿಯಲಿ ಸರ್ವಶಿವಲಿಂಗಧರ ಜಗದ ವಿ । ಸ್ಸೀಮ ಗುರುತನವದು ಕಲತ್ರದಂತೆ ಪರಕರ ॥ ಗಾಮಿಯೆಂದುದನು ಕಂಡಭಿಮಾನವಿಲ್ಲದಲೆ ಸುಮ್ಮನಿಹುದು ಗುರುವರ್ಗ ।॥ ೨೭ ।॥

ವೀರಶೈವ ಸಮಾಜದೊಳಿರುವೋರ್ವನಿಗಾದ । ರಾರು ಗುರುಗಳೆನಿಸರು ಗೋತ್ರಸೂತ್ರರಹಿತರು ॥ ದಾರಗುರುಗಳವರಾಗುವ ಪರಿಯು ಹೇಗೆ, ಶಾಸ್ತ್ರನಿಷಿದ್ಧವಾದಂತ್ಯದ ।॥ ಕಾರ್ಯವಂ ಮಾಡುವರು ಹವ್ಯಕವ್ಯದೊಳು ಕೈ । ಸೇರಿಸುವರುರು ದಂಡಖಂಡನವಗೆಯ್ಯುವರು ॥ ಸಾರಾಂಶವೇನೆನೆ ಗುರುವೆನಿಸಲು ಗುರುವಿನ ನಿಖಿಲಕಾರ್ಯವಾಚರಿಸರು ।॥ ೨೮ ।॥

ಗಣಿಸಲು ವಶಿತ್ವಭೂತಾನುಕಂಪ ಮೊದಲಾ। ದೆಣಿಕೆಗೆ ಬರುವದೊಂದು ಗುರುವರ್ಗದೊಳಗೆ ಗುಣ ॥ ವಣುವಿಲ್ಲವದರಿಂದ ಶಿಷ್ಯಸಂತತಿಯು ಮೊದಲಿನವರಂತಿವರನು ಸಲೆ ।॥ ಮಣಿದು ಕಾಣಿಕೆಯಾದಿಯಾದುಪಕರಣಗಳಿಂ। ದಣುಮಾತ್ರವುಪಚರಿಸದು"ಗುರ್ಾಃ" ಯೆನುತಿರುವಂ ॥ ತಣಿಯರ ಹಿತೋಕ್ತಿಯು ಗುಣಗ್ರಾಹಿಗಳ ಕರ್ಣಗಳವತಂಸವೆನಿಸುವದು ।॥ ೨೯ ।॥

ಹದವಿಲ್ಲದಲೆ ಬಿತ್ತಿ ಹಸಿಗೆಟ್ಟು ಕಳೆಗುಂದು । ವದು ಬೆಳೆಯದಕೆ ನೀರುಣಿಸಿ ಬೆಳೆಸುವಂತಿಹದಿ ॥ ಮೊದಲು ಗುರುಕುಲದಂತ ವಿದ್ಯಾಸುಪೀಠಗಳಲಿ ವಿಪಶ್ಚಿದಧಿಪರಿಂದ ।॥ ಪದಪಿನಿಂದ ಯಥಾರುಚಿವ್ಯಾಕರಣಮುಖಾ । ದುದರ ಸಂಸ್ಕರಣದಿಂ ವಕ್ತೃತ್ವಕಲೆಯಿಂದ ॥ ಬುಧರನ್ನುಮಾಡಿ ಮತ್ತವರಿಂದಲೆ ಮತವನ್ನು ಸುಧಾರಿಸುವದುಚಿತವು ।॥ ೩೦ ।॥

ಹೀಗೆಬಹುವಿಧಭಾಷಣಗಳಾಗೆ ತತ್ಸಭೆಯೊ । ಳಾಗ ಕಾಲೋಚಿತ ನಿಯಮಗಳಿಗೆ ಸಕಲರೂ ॥ ಪ್ಪಾಗೆ ಸುಮಗುಚ್ಛ ಗಂಧಾದಿಯಿಂದ ವಿಭೂಷಿತ ಸಭಿಕರು ತಮ್ಮಗೀಸು ।॥ ಯೋಗವಮಂ ತಂದಿತ್ತು ತಮ್ಮನಾನಂದಘನ । ಸಾಗರದೊಳೋಲಾಡಿಸಿರುವ ಶಿವಲಿಂಗನಂ ॥ ಯೋಗಿವರ ಗುರುಸಿದ್ಧಲಿಂಗನಂ ಪೊಗಳುತ್ತ ಹೋದರಾತ್ಮಪುರಗಳಿಗೆ ।॥ ೨೭ ।॥

ಅಂಭೋಜಸಂಭೂತ ಶಂಬರಾರಿಯತಾತ । ಶಂಭುವೆನಿಪ ತ್ರಿಮೂರ್ತಿಗಳನ್ನು ಸುರಗುರೊಲು ॥ ರಂಭಾಪುರಿ ಶ್ರೀಗಿರಿ ಸಲೆಯುಜ್ಜಯನಿ ಸಿಂಹಾಸನಾಧೀಶರನ್ನು ।॥ ಸಂಭಾವಿಸಿಯಭೂತಪೂರ್ವೋಪಚಾರದಿಂ । ಸಂಭ್ರಮಾತಿಶಯದೊಳು ಬಿಜಯಗೈಸಿದನು ಚಿ ॥ ತ್ತಂಬುಗೆ ಸುಮುದವು ಶಿವಲಿಂಗ ದಿವ್ಯಾಚಾರ್ಯನು ಮಹಾಯಶೋಭರಿತನು ।॥ ೨೮ ।॥

ಗುರುವರೇಣ್ಯನು ತನ್ನ ಸುಸ್ಥಾನಮಠಕೆ ಬಂ । ದರಗಳಿಗೆ ಸುಮ್ಮನಿರದೆ ಸ್ವಕರ್ತವ್ಯ ವಿಮು ॥ ಖರಹ ಚರಪಟ್ಟಾಧಿಕಾರಿಗಳನುಕರೆಸಿ ಸಭೆಯ ನಿರ್ಣಯವನು ತಿಳಿಸಿ ।॥ ಪರಿಪರಿಯ ವಚನದಿಂದ ನವಚೇತನವನ್ನು । ತರಿಸಿ ಕುಂದುಗೊಳ ಮೊದಲಾದೂರುಗಳೊಳು ಭರ ॥ ಭರದಿ ಸಭೆಯಂ ಬರಿಸಿ ನವಸುಧಾರಣವನವರಿಂ ಮಾಡಿಸುತಲಿರ್ದನು ।॥ ೨೯ ।॥

ಒಂದುದಿನ ಗುರುಸಾರ್ವಭೌಮನ ಸುಪಾದಾರ । ವಿಂದಯುಗವಂ ಭಜಿಸಿ ಪಾವನಾಗಲಪೇಕ್ಷೆ ॥ ಯಿಂದೇನೆನೆ ಮಳೆಗಾಲವಿಳಿಯೊಳಿಳಿಯುತಾಗಸದಿ ನೋಲೆಯಲೊಕ್ಕಲರಿಗೆ ।॥ ಸುಂದರ ರಥಾಂಗನಾಮಾನವಂ ಮುರಿದಿಡುವ । ಗಂಧವನ್ನಾಘ್ರಾಣಿಸಲು ಬಂದ ಗಂಧಂಧ । ಯಾಂಧವಾದ ದಿನದಳಿ ನೋಡಗಳ ಮುಸುಕಿನಿಂ ಕಾಣಲಿಲ್ಲ ಕಕುಭಗಳು ।॥ ೩೦ ।॥

ವಿರಹಿಗಳೆದೆಯನುರೆ ಕರಗಸದಂತೆ ಕೊರೆದಘು । ಭರವನು ಪರಿಮಳಕೆರಗಿದ ತುಂಬಿಗಳ ನೆವದಿ ॥ ಧರಿಸಿತದರಿಂ ಹರನಪೂಜೆಗೆರವಾದುದೇನೆನೆ ಕೇದಗೆಯು ತೋರಿತು ॥। ಕರಿಯ ಮುರಿದರದಖಂಡದೊಲತಿ ಧವಲವಾದ । ವರಕೇದಗಿಯ ರಜೋರಾಶಿಯೊಳು ಗಂಧಕ್ಕೆ ॥ ಚಿರತರಮುರುಳುರುಳಿ ಬನದಿ ಚರಿಪಳಿಗಳು ಚಲತಾರೆಗಳೊಲು ಮೆರೆಪವವು ॥। ೩೧ ॥।

ಮಳೆಗಾಲವೆಂಬ ಬಲವಂತಭಟನು ಭುವನದೊ । ಳಿಳಿದಳಿಸುನೀಲ ಘನರಾಜಿಯೆಂಬ ತುಬಾಕೆ ॥ ಯೊಳು ನೆರೆತಟದ್ವರ್ತಿ ಸೇರಿಸುತ ಹಾರಿಸುತ ಬೇಸಿಗೆಯನೋಡಿಸಿದನು ॥। ಬಳಿಗೈದೆಳಸಿದ ಯುವಕರನಿರದೆಬರಿದಾದ । ಮುಳಿಸಿನಿಂ ಮನೆಯಿಂದಲಟ್ಟಿರುವ ಕುಟಿಲಕುಂ । ತಳಿಯುರ ಸುಮಾನಭಂಗವ ಮಾಡಿತು ಕದಂಬಘೂಳಿಧೂಸರವಾಯುವು ॥। ೩೨ ॥।

ಮಧುರ ಮುರಜದ ಪರಿಗಭೀರ ಹೃದಯಂಗಮಾ । ದ ದನಿಯಿಂ ಕಜ್ಜಲದೊಲುರು ಕಪ್ಪೆನಿಪಮೋಡ ॥ ವದುಮದಮದಿರ ಮತ್ತಹ ಮಯೂರಯುಗಲವನು ಪದಪಿಂ ಕುಣಿಸಿತು ಬನದಿ ॥। ಮೊದಲುದರಿದ ಮುಗಿಲಿನ ನೀರಿನ ಕಣಗಣಗಳ । ವೊದಗಿದ ನೆಲದತಾಪವನು ಕಳೆದೊಲಧ್ವಗರ ॥ ಹೃದಯತಾಪವಕರಂ ಕಳೆಯದಾದವದೇನಳುಂಬಮೋ ಭುವನದೊಳಗೆ ॥। ೩೩ ॥।

ಮುತ್ತಿನಹುಡಿಯಪರಿ ಬಿಳುಪುವೆತ್ತ ಭೂಮಿಧರ । ದೆತ್ತರದಿ ಬೀಳುವ ಸರಿತ್ತುಷಾರಕಣೆಯಾ ॥ ದುತ್ತಮ ಕುಟಜಧೂಳಿಯು ಬನದಿ ಪಸರಿಸಿ ಮೊಸರಿನಕಣಸಿರಿಯನಾಂತುದು ॥। ಅತ್ತಿತ್ತನೋಡುತ್ತ ಪಂಕಮಯ ಪಥದೊಳಗೆ । ತತ್ತರಿಸುತೆ ನಡೆಯುತ್ತಿರುವ ನೃತ್ತಸ್ತನದ ॥ ಮತ್ತಕಾಶಿನಿಯು ಕಾಲ್ಜಾರಿ ಬೀಳೆ ಯುವಕರ ಪಲ್ಲುಗಳು ಬತ್ತಲಹವು ॥। ೩೪ ॥।

ಶಿಟ್ಟನಿಂ ಪ್ರಿಯತಮನ ವಾಸಮನೆಯುಂ ಭರದಿ । ಬಿಟ್ಟುಪೋಗುವವಸರದೊಳು ತಟ್ಟನೆ ಜಲದವು ॥ ಗಟ್ಟಿಗರ್ಜಿಸಲಾಗ ಚಪಲೆಯರು ಹಿಮ್ಮೆಟ್ಟಿ ಬಂದಪ್ಪಿದರಿನಿಯರಸು ॥। ನೆಟ್ಟನೆಜಲದ ಕಣಗಣಾಭರಣದೆಲರುಸಲೆ । ಮುಟ್ಟುತಿರಲಾವ ವಿರತ ವರನು ವಿಷಯಗಳೊಳ ॥ ಪಟ್ಟವನಿಳಿಯೊಳಾಗನೆಂದು ಗರ್ಜಿಸುವಂತೆ ಮರಿದುಂಬಿಗಳುಲಿದವವು ॥। ೩೫ ॥।

ಭಾವುಕಹ ಮಳೆಗಾಲದೊಳಗಾಗ ಮಿಸುಗುವ । ಶ್ರಾವಣದಿ ಭೂವಲಯದೊಳುರುಭಕ್ತಿ ಭರದಿಂ ॥ ದೇವದೇವನೆನಿಪ ಮಹಾದೇವನಂ ಲಿಂಗರೂಪನಂ ಭಾವಿಕರಹ ॥। ಶೈವರು ಪಯೋಧಾರೆಯಿಂದಲು ಶ್ರೀರುದ್ರ । ಪಾವನ ಸುಮಂತ್ರಂಗಳಿಂದಲಭಿಷೇಕಿಸಿಸು ॥ ಧಾವಲ್ಯಭರಿತ ಭಸಿತ ಸುಗಂಧ ಗಂಧಾಕ್ಷತೆಗಳಿಂದ ಬಿಲ್ವದಿಂದ ॥। ೩೬ ॥।

ಮಲ್ಲಿಕಾತಲ್ಲಜಸುಮಾಲತೀ ಮೊದಲಾದ । ಸಲ್ಲಸಿತ ದರಪಸಿತ ಸುಮಗಳಿಂದಲು ಕಾಡಿ ॥ ನಲ್ಲಿ ಬೆಳೆದಿಹ ಗುಗ್ಗುಳ ಮೊದಲಹ ಧೂಪದಿಂ ದೀಪದಿಂದ ವರಘಂಟೋ ॥। ತ್ಪುಲ್ಲರವದಿಂದ ನೈವೇದ್ಯ ತಾಂಬೂಲ ಮ । ತ್ತುಲ್ಲಲಿತ ನತಿಗಳಿಂ ನುತಿಗಳಿಂ ಸಲೆಶಾಸ್ತ್ರ ॥ ದಲ್ಲುಕ್ತವಿಧಿಯಿಂದ ಪೂಜಿಸಿ ಸುಕೃತಭಾಗಿಗಳಹರೆಲ್ಲರಿಳಿಯೊಳಗೆ ॥। ೩೭ ॥।

ಅಂತಹ ಸುಪುಣ್ಯಮಾಸದಿ ವೀರಶೈವರಾ । ಕಂತುಹರನಂತೆ ಭಕ್ತ್ಯುತ್ಕರ್ಷದಿಂದ ಗುಣ ॥ ವಂತಗುರುವಿನ ಪೂಜೆಯಂ ಮಾಡುವರದರಿಂ ಪುಲ್ತೂರು ಗಣ್ಯಜನರು ॥। ಸಂತಸದಿ ಬಿನ್ನಹಂ ಗೆಯ್ಯಲೂರಿಗೆಬಂದ । ಶಾಂತಿಘನಸಿದ್ಧಲಿಂಗ ಗುರುವರ್ಯನ ಭಕ್ತಿ ॥ ಮಂತರಾಮಾಸದೊಳು ಪಾದಪೂಜೆಯನುಮಾಡಿದರು ಸಂಭ್ರಮದೊಳವರು ॥। ೩೮ ॥।

ನಾಲವತ್ತೊಂದುದಿನದ ತಪಶ್ಚರಣವನುರು । ಬಾಲೇಂದು ಧರನ ಮೋದಾರ್ಥವಾಗೆಸಗುತೆ ಸು ॥ ಲೀಲೆಯಿಂ ಭಕ್ತರಾಚರಿಪ ಸಂಪೂಜೆಯನ್ನಂಗೀಕರಿಸುತೆ ನಿಯಮ ॥। ದಾಲಲಿತ ಕಡೆಯದಿನ ಬರೆ ಮುನಿಪನು ಭಜಕರ । ನಾಲಸ್ಯವಿಲ್ಲದೆ ಕರೆಸಿ ಪೇಳ್ದನೀವೀ ಸು ॥ ಕಾಲದೊಳು ಗಣವರರ ತೃಪ್ತಿಯನುಮಾಡಿಸುಕೃತವನು ಸಲೆ ಗಳಿಸಿರೆಂದು ॥। ೩೯ ॥।

ಪಾಯಸಾದಿ ಪದಾರ್ಥಗಳನು ಸಲೆಯಾಕಂಠ । ವಾಯಾಸ ವಾಗುವಂತುಂಡು ತಾಂಬೂಲವಂ ॥ ಬಾಯಿಗೊಂಡುಬಹು ದಕ್ಷಿಣವನ್ನು ಕೈಗೊಂಡು ಕೊಂಡಾಡುತಯ್ಯನವರು ॥। ಗಾಯನಂ ಗೆಯ್ಯುತುದ್ಯಾನದಿಂ ಬಂಡುಂಡ । ಪಾಯರಹಿತೆಳೆದುಂಬಿಗಳವಿಂಡಿನಂತೆ ನಿಜ ॥ ಕಾಯಭಾರಾಗೆ ಬಾಗುತೆ ಬಳಕುತೆಹೊರಟಿತು ನೀಡುವರುದಾರರ್ಕೈಸೆ ॥। ೪೦ ॥।

ಸುರರಗ್ನಿಮುಖದಂತೆ ಲಿಂಗ, ಜಂಗಮಮುಖವ । ದಿರುತಿಹುದರಿಂ ಜಂಗಮವು ತೃಪ್ತಿಗೊಳಲು ಪುರ ॥ ಹರನ ತೃಪ್ತಿಯದರಿಂದ ಸಕಲಚರಾಚರ ಜಗವು ತೃಪ್ತವಿದುನಂಬದೆ ॥। ಬರೆಲಿಂಗಕನೆ ಮಾಡಿದುದನು ಸಲೆ ತೋರಿಸಲ । ದರಬಾಯೊಳಿಡುವದಂ ಬಿಟ್ಟನ್ನದ ಕಬಲವ ॥। ಶಿರದೊಳಿಟ್ಟ ಪರಿಯಾಗಿ ಫಲವನು ಕಾಣದೆ ಭುವನದಿ ನಿಷ್ಫಲವೆನಿಪುದು ॥। ೪೧ ॥।

ನಿತ್ಯನೈಮಿತ್ತಿಕಸಮಯವೆಂದು ತೃಪ್ತಿಯದು । ಮುತ್ತೆರನಿರುವದವುಗಳೊಳು ಸಮಯತೃಪ್ತಿ ಸ ॥ ರ್ವೋತ್ತಮವು, ಸುಗವಃವುಸುಫಲದಾಯಕವದುತ್ತಮವು ಭೃತ್ಯನಹ ಭಕ್ತಗೆ ॥ ಕೃತ್ತಿವಾಸನ ನಿತ್ಯಪೂಜೆಯು ಸತತ ತನಗೆ । ಸೂಕ್ತವೆನಿಪ ಗುರುಚರತೃಪ್ತಿಯು ಸದಾಚಾರ ॥ ಸತ್ಯವೆಂಬುವ ಧರ್ಮಗಳಿವಂ ಬಿಡದಲಾಚರಿಸೆ ಮರ್ತ್ಯರು ವಿಮುಕ್ತರು ॥। ೪೨ ॥।

ಎಂದುತಾಪಸಸವರನು ಬಂದುಕುಳಿತಿಹ ಭಕ್ತ । ವೃಂದಕುಪ
ದೇಶವನ್ನಿತ್ತವರೆ ಕಡೆಯಿಂದ ॥ ಸಂದಕಾಣಿಕೆಯುಂ ಗ್ರಹಿಸಿ ಶು
ಭಾಶೀರ್ವಾದ ವಚನದಿಂದಭಿನಂದಿಸಿ ॥। ಮುಂದೆ ಪಯಣವ ಬೆ
ಳಸೆ ಸೀಮಾಂತದವರಿಗೈ । ತಂದವರನ್ನುಪಚರಿಸಿ ಓವ್ಮೆತ್ಟಿಸಿ ನಿಜ
ಸಿ ॥ ಬೃಂದಿಯೊಡನೆ ಮುದವುಳ್ಳವನಾಗಿ ಬಳ್ಳಾರಿಪುರಕೆ ಚಿತ್ತೈ
ಸಿದನಲ ॥। ೪೩ ॥।

ಕೊಟ್ಟಿರುವ ಬಿನ್ನಹವ ಗುರುತಟ್ಟನನುಮತಿಸಿ । ಪಟ್ಟಣಕೆ
ಚಿತ್ತೈಸಿದನೆನುತೆ ಪುರಪ್ರಮುಖ ॥ ರೊಟ್ಟುಗೂಡೆದುರೋಗಿ ಸಂಭ್ರ
ಮದಿ ಕರೆತಂದು ದರ್ಬಾರ ಮಂಟಪದೊಳ ॥। ಗಿಟ್ಟಿರುವ ಮೃಗರಾ
ಜಪೀಠದೊಳು ಕುಳ್ಳಿರಿಸೆ । ಪಟ್ಟಾಧಿಕಾರಿಯಹ ಸಿದ್ಧಲಿಂಗನು
ಹೃದಯ ॥ ಮುಟ್ಟುವಂತೆ ಸಮಯೋಚಿತ ವಚನವುಸುರಲವಾ
ಲಿಸಿ ನಮಿಸಿ ಪೋದರು ॥। ೪೪ ॥।

ಭೀಕರತರವಹ ನೀರಿನ ಬರವೊದಗಿಕರಂ । ತೋರುವ ಸಮ
ಯದಿ ಕೆರೆಭಾವಿಯಾದಿ ಜಲದಾ ॥ ಧಾರಗಳೊಣಗಿ ಜನದ ಹಾಹಾ
ಧ್ವನಿಯು ನಗರದೆಲ್ಲೆಡೆಯೊಳಗಿದೆಯೆಂದು ॥। ಭಾರಿದುಃಖದಿ ಮನ
ವಿ ಮಾಡಿಕೊಳ್ಳುವ ಜನವ । ನಾರೆಬಿಡಿರಿ ಮನದ ದುಗುಡನುರೆ ದ
ಯಾಕರನು । ಧೀರಮಲ್ಲೇಶನು ಬಿಡಿಸುವನೆಂದವರನ್ನು ಸಂತೈಸಿದ
ನು ಸದಯನು ॥। ೪೫ ॥।

ಪನ್ನೊಂದು ದಿಸವರಿಗೆ ಪನ್ನೊಂದು ವೈದಿಕರು । ಸನ್ನುತಸ್ವರ
ದಿಂ ಪ್ರತಿದಿನ ಪನ್ನೊಂದು ಸಾ ॥ ರೆನ್ನುತಿರೆ ಶತರುದ್ರರುಚಗಳಿಂ
ಲಿಂಗರೂಪ ಪುರಹರ ಪರತರಶಿವ ॥। ನನ್ನು ದಿವ್ಯಜಲದಿಂದಭಿಷೇ
ಕಿಸಿ ಪದಪಿಂ । ಸನ್ನುತಹಭಸಿತ ಗಂಧಾಕ್ಷತಗಳನ್ನಿಟ್ಟು ॥
ಭಿನ್ನಭಿನ್ನ ಕೃಮಿತಿನ್ನದ ಸಾಸಿರಸುಬಿಲ್ವದಳಗಳಿಂ ಪೂಜಿಸಿದನು
॥। ೪೬ ॥।

ಸಂತಸದೊಳು ನಿಯಮದ ಕಡೆಯದಿವಸದೊಳು ದಿನ। ಕಿಂತ
ಲು ದಶಗುಣಾಧಿಕ ಮಹೇಶತೃಪ್ತಿಯೋ ॥ ರಂತೆಮಾಡಿಸಿ ಭಕ್ತರೊ
ಡನೆ ಗುರು ನಲಿದಾಡುವಾಗ ಶಿವಕೃಪೆಯಾಗೆ ಸ ॥। ಮಂತಾತ್ತು
ಜಡಿಮಳೆಯು ಚೆಲ್ಲುಸುರಿದೊಲು ಸುರಿಯ । ಲಂತಾಗ ಕೆರೆಭಾವಿ
ಕುಂಟೆಮೊದಲಾದವು ನಿ ॥ ತಾಂತಜಲತುಂಬಿ ತುಳುಕಿದವು, ಪುರಹರ
ನೊಲಿಯಲೇನಾಗದು ಭುವನದೊಳು ॥। ೪೭ ॥।

ಎಲ್ಲಗುರುವಂತ ಗುರುವಲ್ಲನೀತನುರೆ ಪೂ । ಬಿಲ್ಲನುರುಹಿದ
ಶೂಲಿಯಂತೆ ಜಗದೊಳು ಬಲ್ಲಿ ॥ ದಲ್ಲದೊಡೆ ಪನ್ನೊಂದು ದಿನದೊ
ಳು ಜಗಜಲಮಯಮಪ್ಪಂತೆ ಮಳೆಗರಿಸಿದ ॥। ನುಲ್ಲಾಸದಿಂದೆಂದು
ನಿಖಿಲಜನನಿಚಯ ಮನ । ಬಲ್ಲಂತೆ ಕೊಂಡಾಡಿ ತಹೊ ಹರಿಸ ವು
ಕ್ಕೇರೆ ॥ ನಿಲ್ಲದ್ವೈತಂದು ಗುರುಸಿದ್ಧಲಿಂಗಯಮಿಯಂ ಭಜಕನಂದ
ನ ತರುವನು ॥। ೪೮ ॥।

ವಿದ್ಯೆಯು ಭುವನದಿ ಬುದ್ಧಿಮತಿತಾಯಿಯು ತನ್ನ । ಗಿದ್ದ
ಮಗನಂತೆ ಯೂನಾಗಲದು ಕಾಯುವದು ॥ ಬುದ್ಧಪಿತನಂತೆ ಬಹು
ತಿದ್ದಿ ಹಿತಮಾರ್ಗದೊಳು ನಡೆಸುವದು, ಮಿತ್ರನಂತ ॥। ಲಿದ್ದಡ್ಡದಾ
ರಿಯೊಳು ಪೋಗುತಿದ್ದರೆ ಕರಂ । ಬುದ್ಧಿಮಾತುಗಳಿಂದಲದನಂ ಬಿ
ಡಿಸುತೆ ಸುಖ ॥ ವಿದ್ಯೆಡೆಗೆಳೆಯುವದವನನ್ದದರಿಂದೇನು ಮಾಡದದಿ
ಲ್ಲದವನು ಪಶುವು ॥। ೪೯ ॥।

ಭಾರತಧರಾವಲಯದೊಳಖಿಳ ಮತಗಳೊಳಗೆ । ವೀರಶೈವ
ಮತವಂತಹ ವಿದ್ಯೆಯಿಂದ ಬಹು ॥ ದೂರ ಹಿಂದುಳಿದಿರುವದದ
ರಿಂದದನನು ಕಲಿಸಿ ಸಲೆ ಮುಂದಕೆತರುವದು ॥। ದಾರಬುದ್ಧಿಯು
ತ ಪ್ರತಿಮನುಷ್ಯನ ಕೆಲಸವ । ಪಾರ ಧನಸಂಚಯವ ಮಾಡುವ
ದವಶ್ಯವೆಂ ॥ ದೂರೀಕರಿಸಿ ಸಭ್ಯರದರಭಾರವನು ಮಹಿಮಾಗಾರ
ಗೊಪ್ಪಿಸಿದರು ॥। ೫೦ ॥।

ಎಂದುತಾಪಸಸವರನು ಬಂದುಕುಳಿತಿಹ ಭಕ್ತ । ವೃಂದಕುಷ ದೇಶವನ್ನಿತ್ತವರೆ ಕಡೆಯಿಂದ ॥ ಸಂದಕಾಣಿಕೆಯುಂ ಗ್ರಹಿಸಿ ಶು ಭಾಶೀರ್ವಾದ ವಚನದಿಂದಭಿನಂದಿಸಿ ॥। ಮುಂದೆ ಪಯಣವ ಬೆ ಳಸೆ ಸೀಮಾಂತದವರಿಗೈ । ತಂದವರನ್ನುಪಚರಿಸಿ ಓವೈಟ್ಟಿಸಿ ನಿಜ ಸಿ ॥ ಬೃಂದಿಯೊಡನೆ ಮುದವುಳ್ಳವನಾಗಿ ಬಳ್ಳಾರಿಪುರಕೆ ಚಿತ್ತೈ ಸಿದನಲ ॥। ೪೩ ॥।

ಕೊಟ್ಟಿರುವ ಬಿನ್ನಹವ ಗುರುತಟ್ಟನನುಮತಿಸಿ । ಪಟ್ಟಣಕೆ ಚಿತ್ತೈಸಿದನೆನುತೆ ಪುರಪ್ರಮುಖ ॥ ರೊಟ್ಟುಗೂಡೆದುರೋಗಿ ಸಂಭ್ರ ಮದಿ ಕರೆತಂದು ದರ್ಬಾರ ಮಂಟಪದೊಳ ॥। ಗಿಟ್ಟಿರುವ ಮೃಗರಾ ಜಪೀಠದೊಳು ಕುಳ್ಳಿರಿಸೆ । ಪಟ್ಟಾಧಿಕಾರಿಯುಹ ಸಿದ್ಧಲಿಂಗನು ಹೃದಯ ॥ ಮುಟ್ಟುವಂತೆ ಸಮಯೋಚಿತ ವಚನವುಸುರಲವಾ ಲಿಸಿ ನಮಿಸಿ ಪೋದರು ॥। ೪೪ ॥।

ಭೀಕರತರವಹ ನೀರಿನ ಬರವೊದಗಿಕರಂ । ತೋರುವ ಸಮ ಯದಿ ಕೆರೆಭಾವಿಝಾವಿ ಜಲದಾ ॥ ಧಾರಗಳೊಣಗಿ ಜನದ ಹಾಹಾ ಧ್ವನಿಯು ನಗರದೆಲ್ಲೆಡೆಯೊಳಗಿದೆಯೆಂದು ॥। ಭಾರಿದುಃಖದಿ ಮನ ವಿ ಮಾಡಿಕೊಳ್ಳುವ ಜನವ । ನಾರೆಬಿಡಿರಿ ಮನದ ದುಗುಡನುರೆ ದ ಯಾಕರನು । ಧೀರಮಲ್ಲೇಶನು ಬಿಡಿಸುವನೆಂದವರನ್ನು ಸಂತೈಸಿದ ನು ಸದಯನು ॥। ೪೫ ॥।

ಪನ್ನೊಂದುದಿನವರೆಗೆ ಪನ್ನೊಂದು ವೈದಿಕರು । ಸನ್ನುತಸ್ವರ ದಿಂ ಪ್ರತಿದಿನ ಪನ್ನೊಂದು ಸಾ ॥ ರೆನ್ನುತಿರೆ ಶತರುದ್ರರುಚಗಳಿ ಲಿಂಗರೂಪ ಪುರಹರ ಪರತರಶಿವ ॥। ನನ್ನು ದಿವ್ಯಜಲದಿಂದಭಿಷೇ ಕಿಸಿ ಪದಪಿಂ । ಸನ್ನುತಹಭಸಿತ ಗಂಧಾಕ್ಷತಗಳನ್ನಿಟ್ಟು ॥ ಭಿನ್ನಭಿನ್ನ ಕೃಮಿತಿನ್ನದ ಸಾಸಿರಸುಬಿಲ್ವದಳಗಳಿಂ ಪೂಜಿಸಿದನು ॥। ೪೬ ॥

ಸಂತಸದೊಳು ನಿಯಮದ ಕಡೆಯದಿವಸದೊಳು ದಿನ। ಕಿಂತಲು ದಶಗುಣಾಧಿಕ ಮಹೇಶತೃಪ್ತಿಯೋ ॥ ರಂತೆನಾಡಿಸಿ ಭಕ್ತರೊಡನೆ ಗುರು ನಲಿದಾಡುವಾಗ ಶಿವಕೃಪೆಯೂಗೆ ಸ ॥ ಮಂತಾತ್ತು ಜಡಿಮಳೆಯು ಕಲ್ಲುಸುರಿದೊಲು ಸುರಿಯ । ಲಂತಾಗ ಕೆರೆಭಾವಿ ಕುಂಟೆವೊಡಲಾದವು ನಿ ॥ ತಾಂತಜಲತುಂಬಿ ತುಳುಕಿದವು, ಪುರಹರನೊಲಿಯಲೇನಾಗದು ಭುವನದೊಳು ॥ ೪೭ ॥

ಎಲ್ಲಗುರುವಂತ ಗುರುವಲ್ಲನೀತನುಕಿ ಪೂ । ಬಿಲ್ಲನುರುಹಿದ ಶೂಲಿಯಂತೆ ಜಗದೊಳು ಬಲ್ಲಿ ॥ ದಲ್ಲದೊಡೆ ಇನ್ನೊಂದು ದಿನದೊಳು ಜಗಜಲಮಯಮಪ್ಪಂತೆ ಮಳೆಗರಿಸಿದ ॥ ಸುಲ್ಲಾಸದಿಂದೆಂದು ನಿಖಿಲಜನನಿಚಯ ಮನ । ಬಲ್ಲಂತೆ ಕೊಂಡಾಡಿ ತಹೊ ಹರಿಸ ವುಕ್ಕೇರೆ ॥ ನಿಲ್ಲದ್ವೈತಂದು ಗುರುಸಿದ್ಧಲಿಂಗಯುವಿಯುಂ ಭಜಕನಂದನ ತರುವನು ॥ ೪೮ ॥

ವಿದ್ಯೆಯು ಭುವನದಿ ಬುದ್ಧಿಮತಿತಾಯಿಯು ತನ್ನ । ಗಿದ್ದ ಮಗನಂತೆ ಯಾವಾಗಲದು ಕಾಯುವದು ॥ ಬುದ್ಧಿಪಿತನಂತೆ ಬಹುಶಿದ್ದಿ ಹಿತಮಾರ್ಗದೊಳು ನಡೆಸುವದು, ಮಿತ್ರನಂತ ॥ ಲಿದ್ದಡ್ಡದಾರಿಯೊಳು ಪೋಗುತಿದ್ದರೆ ಕರಂ । ಬುದ್ಧಿಮಾತುಗಳಿಂದಲದನಂ ಬಿಡಿಸುತೆ ಸುಖ ॥ ವಿದ್ಬೆಡೆಗೆಳೆಯುವದವನನ್ದರಿಂದೇನು ಮಾಡದದಿಲ್ಲದವನು ಪಶುವು ॥ ೪೯ ॥

ಭಾರತಧರಾವಲಯದೊಳಖಿಳ ಮತಗಳೊಳಗೆ । ವೀರಶೈವ ಮತವಂತಹೆ ವಿದ್ಯೆಯಿಂದ ಬಹು ॥ ದೂರ ಹಿಂದುಳಿದಿರುವದದರಿಂದದನನು ಕಲಿಸಿ ಸಲೆ ಮುಂದಕೆತರುವದು ॥ ಧಾರಬುದ್ಧಿಯುತ ಪ್ರತಿಮನುಷ್ಯನ ಕೆಲಸವ । ಪಾರ ಧನಸಂಚಯವ ಮಾಡುವದವಶ್ಯವೆಂ ॥ ದೂಕೀಕರಿಸಿ ಸಭ್ಯರದರಭಾರವನು ಮಹಿನಾಗಾರ ಗೊಪ್ಪಿಸಿದರು ॥ ೫೦ ॥

ಎಲ್ಲಶಾಸ್ತ್ರಗಳಬಲ್ಲಾತನೆಂದೋರ್ವ ಬುಧ । ಮಲ್ಲನು ಧರಾತಲದಿ ಸಜ್ಜನರಿಗೆಲ್ಲರಿಗೆ ॥ ಸಲ್ಲದಲ್ಲದ ದುರಾಚಾರ ದುರ್ನೀತಿಗಳಿಗೆಡೆಯಾದುದನ್ನು ತಿಳಿದು ॥। ಪಲ್ಲವಿಸಿದ ಕಳಕಳಿಯಿಂ ಕೂಡಿ ಕೆಲ ಜನರು । ನಿಲ್ಲದವನನ್ನು ಕರವಿಡಿದು ಕರತಂದು ಗುರು ॥ ವಲ್ಲಭನ ಪಾದಪಲ್ಲವಗಳಿಗೆರಗಿ ತಾವವನನು ಬಿಡದೆರಗಿಸಿ ಸಲೆ ||| ೫೧ |||

ನಿಂತು ಕೈಮುಗಿದಿವನು ಬುಧನಿದ್ದರ ಬುಧನಂ । ತಂತಿಲ್ಲದತಿಹೀನ ವೃತ್ತಿಯವನಿಹುದರಿಂ ॥ ಶಾಂತಮೂರ್ತಿಯೆ ಸುಮಂತ್ರೋಪದೇಶ ಬಲದಿಂದಾಚಾರವಂತನನ್ನು ॥। ಸಂತಸದಿ ಮಾಳ್ಪುದೆಂದತಿ ದೈನ್ಯದಿಂ ಬೇಡು । ವಂತವರಿಗೊಲಿದವನು ಬೇಡೆನಲು ತಿಳಿ ಹೇಳಿ ॥ ಕಂತುಹರ ಶಿವಮಂತ್ರದುಪದೇಶವಿತ್ತನುರುಮಂತ್ರಜ್ಞಮೂರ್ಧನ್ಯನು ||| ೫೨ |||

ಒಂದುತಿಂಗಳೊಳಗಾಮಂದಮತಿಯಾಮಂತ್ರ । ವಂದಪಥ್ಯಕೆ ಮಹೌಷಧದಂತೆ ವಿಪರೀತ ॥ ದಿಂದಿರಲು ಹೃದಯದೊಳದನು ದಂದಶೂಕಗರದಂತೆ ಸಹಿಸಲದಟಿಲ್ಲ ॥। ದಿಂದುಶೇಖರ ರೂಪನಂದದಿರುವ ವರಗುಣ । ಸಿಂಧುವಿನಡಿಗಳೆಡೆಗೆ ತಡಗೆಯ್ಯದೈದಿ ಮುನಿ॥ ಸಿಂಧುರನೆ ನೀನಿತ್ತಮಂತ್ರವಂ ತೆಗೆದುಕೋಯೆಂದು ಹಟಮಾಳ್ಪನನ್ನು ||| ೫೩ |||

ನೋಡಿಶಿವನುತಿಮಾಡಿ ತೋಯವನು ಬಾಯೊಳಗೆ । ನೀಡಿ ಮುಕ್ಕುಳಿಸಿ ಚಲ್ಲೆನಲವನದನು ಚಲ್ಲೆ ॥ ಗೋಡೆಯೊಳೋಂಕಾರ ಮೂಡಲದಗಂತೈದುಸಾರೆ ಮುಕ್ಕುಳಿಸುಗಳಿಸೆ ॥। ನಾಡೆಕಾಣಿಸಿತು ಪಂಚಾಕ್ಷರುರುಮಂತ್ರಾಗ। ರೂಢಿಯೊಳಚೇತನದಿ ಬುಧಬೀಳೆ ಗೋಳೀಳೆ ॥ ಕೂಡಿದಯೆಯಿಂದವನನು ಸಚೇತನನುಮಾಡಿದನು ಗುರುವು ಜನಪೊಗಳೆ ||| ೫೪ |||

ಪೂರ್ವಾಧಿಕಾರಿಮಾಡಿಟ್ಟ ಮಠದುರು ರುಚಿರ । ವಾರ್ಯವಿದ್ದ
ರು ಸಮಾಜ ಪ್ರಾಣನಹ ಗುರುವ ॥ ಖರ್ವಧೃತಿಯಿಂ ಚರಿಸಿ ಕಾ
ಣಿಕೆಯುಪ್ಪೈಸಿಬಹು ಧನವನಿತ್ತಾಸುನಿಧಿಗ ॥। ಪೂರ್ವರೂಪವನಿ
ತ್ತು ಜನದಶಣ್ಣನಕೆ ತಂ । ದುರ್ವಿಯಹಿತಕೆ ಪರ್ಯಟನವಗೆಯ್ದನು
ಧರಾ ॥ ಶರ್ವನು ಪರೋಪಕಾರಕ್ಕೆ ಪಜ್ಜನದ ಜನ್ಮಗಡ ಸಪ್ತಾಶ್ವ
ನಂತೆ ॥। ೫೫ ॥।

ಹೊಸಪೇಟೆದೇಶದೊಳಗಿರುತಿರುವ ಪುಟ್ಟ ಬೆ । ಟ್ಟಸೆವ ಸು
ಕ್ಷೇತ್ರದಿಪ ಜಂಬುನಾಥನೆನಿಸುವ ॥ ಬಿಸಿಗಂಣನಶಿವನ ಪದಾಂಬು
ಜಯುಗವ ಕಾಣಲಲ್ಲಿಗೈದಿದನು ತವಸಿ ॥। ಯಸಮ ಮಹಿಮಾಂಕ
ನುಜ್ಜಯನೀ ಪುರಾಧೀಶ । ನಸವಸದಿನೆದುರುಗೊಂಡರ್ಚಕನು
ಗುರುವನ್ನು ॥ ಹಸನಾದ ಪೊಸಜಾಗದೊಳಿಳಿಸಿ ಪದಬಿಸಜಕ್ಕೆರಗಿ
ವಿಜ್ಞಾಪಿಸಿದನು ॥। ೫೬ ॥।

ಜೀಯ ಚಿತ್ರೈಸಯ್ಯ ಕೂಪಕಾಲಿಡಲೊಣಗೆ । ಬಾಯಮಾ
ತಲ್ಲರ್ಚಿಸೆ ಜಲಮಯವೀವರಿಗ ॥ ಪಾಯವಿಲ್ಲದಲಾಗುತಿದ್ದಿತದು
ಮೊನ್ನೆ ರುತುಮತಿಯಾದ ತಿಳಿಗೇಡಿ ॥। ತೋಯಜಾಂಬಕಿಯು
ಕಾಲಿಟ್ಟು ಕೈಮೊಗದೊಳೆಯೆ । ಮಾಯವಾಗಿರುವ ಜಲವೇನುಮಾ
ಡಿದರಿಲ್ಲ ॥ ಕಾಯಜಾರಿಯ ಪೂಜೆ ಪೂರ್ವದಂತಿಲ್ಲ ಬಂದವರಕಷ್ಟ
ಕೆಣೆಯಿಲ್ಲ ॥। ೫೭ ॥।

ಎಂದವನ ಬಿನ್ನಪವ ಮನದಂದು ಬಹಳ ನೊಂ । ದಂದಿನಿರು
ಳೋಗೆ ಮಂದೇಹಹರನುದಯದೊಳು ॥ ನಿಂದೇಕಪಾದದೊಳು
ಪಂಚಾಗ್ನಿತಪನಂತೆ ಪಂಚಾಕ್ಷರಮಹಾಮನು ॥। ನಿಂದಶಿವನಂ ಮೆ
ಚ್ಚಿಸುವ ಸುಯೋಗದೊಳಗಿರೆ । ಮುಂದೆ ಸಾಯಂ ಸಂಧೆಯ ಸಮ
ಯದಿ ಪೂಜಕನು ॥ ಬಂದು ದಂಡವದೆರಗಿ ಕೂಪವಮರಾಪಗೆಯ
ಜಲದಿಂದ ತುಂಬಿತೆಂದ ॥। ೫೮ ॥।

ಕೇಳಿಯೋಗವನುಳಿದು ತಾಪಸವರೇಣ್ಯನುರೆ । ತಾಳಿತೋಷ ವಮನದಿ ಮರುದಿವಸದಾದಿಯೊಳು ॥ ಭಾಳಲೋಚನ ಜಂಬುನಾಥನಂ ಶತರುದ್ರಮಂತ್ರದಿಂದಭಿಷೇಕಿಸಿ ॥। ಮೇಳೈಸಿದುಪಚಾರದಿಂದುಪಚರಿಸಿ ಶಿವನ । ಕೇಳಿಯೊಳು ನಲಿದಾಡಿ ಭಜಕತಾಪಸವದೂಡಿ ॥ ಬಾಳಸುಖನೀಡಿಯುವರುಗಳಿಂದ ಬೀಳ್ಕೊಂಡು ಪಯಣಗತಿಯಿಂದ ಗುರುವು ॥। ೫೯ ॥।

ಬಳ್ಳಾರಿಮಂಡಲದೊಳಿಹ ಬೊಂಮನಾಳೆಂಬ । ಹಳ್ಳಿಗೈತರಲಲ್ಲಿ ಗೌಡ ಕುಲಕರ್ಣಿವೊದ ॥ ಲುಳ್ಳ ಮನುಜರು ತಕ್ಕವೈಭವದಿ ಕರೆದೊಯ್ದು ಮುಕ್ಕಂಣನ ಗುಡಿಯೊಳಗೆ ॥। ಬಳ್ಳಿವರಿಯುವ ಬಕ್ಕುತಿಯಿಂದಿಳಿಸಿಧರು ಮುಖದೊ । ಳೆಳ್ಳಷ್ಟು ಕಳೆಯಿರದ ಜನದ ನೀರಿನ ಗೋಳು ॥ ಮುಳ್ಳುಚುಚ್ಚಿದೊಲಾಗಿ ಮನಕೆ ಗುರುವರನದರುಪಾಯುವನ್ನು ಹುಡುಕಿದನು ॥। ೬೦ ॥।

ಆರಾರರಿಯದಂತೆ ರಾತ್ರಿಕಡೆಜಾವದೊಳು । ಮಾರಾರಿಯ ನೆನೆದುಂದೆದ್ದು ಪೊರಬದಿಯಲ್ಲಿ ॥ ಘೋರವನೆನೆ ಹಬ್ಬಿದ್ದ ಮುಳ್ಳುಳ್ಳ ಡಬ್ಬಗಳ್ಳಿಯಲಿ ಹೆದರದಲೆ ತೂರಿ ॥। ಸೇರಿ ನಡುನೆಲದಿ ಕುಳಿತನು ಗದ್ದುಗೆಯೊಳಂತೆ । ಧೀರಗುರುವಾರ್ಯೆಯ್ಯ ಮುಳ್ಳುಗಳು ಮಿದುವಾದ ॥ ವಾರ್ಯವರಶೇಖರನ ಸುಶರೀರಕಹೊ ಬೆಂಣೆಯಪ್ಪರಿ ವಿಶ್ವಂಭರೆಯೊಳು ॥। ೬೧ ॥।

ಈಶಾನುಕಂಪಾತಿಶಯುದಾಸರದಿಹ ಶಿವ । ದಾಸನಿಗೆ ವಿಷವ ಮೃತವೆನಿಸುವದು, ವಾರಾಶಿ ॥ ಲೇಸೆನಿಪನೆಲವಪ್ಪುದೆಂಬುವ ಪುರಾತನರ ಸೂಕ್ತಿ ರಿಕ್ತವೆನಿಸುವದೆ ॥। ಭಾಸವಾಗುವ ಹಸಿವುತೃಷೆಗಳಿಗೆಷ್ಟೆಯ್ದು ತಾನು । ಲೇಶವಾದರೆನಿಸದುಮೇಶ ಸ್ಮರಣಸುಧಾ ॥ ರಾಶಿಪಾನಪರಿತೃಪ್ತನು ಹಸಿವದು ಪ್ರಾಣಧರ್ಮವಾತ್ಮನದಲ್ಲವು ॥। ೬೨ ॥।

ಮೂರು ದಿನಗಳು ಪೋಗೆ ನೋಡಮಿಂಚುಗಳೇನು । ತೋ
ರದೆ ಮುಗಿಲು ಹರಿದೊಲು ಮಳೆಯು ಸುರಿಯೆ ಜಲಾ ॥ ಧಾರಗಳು
ತುಂಬಿತುಳುಕೆ ಧರೆಯುರು ನೀರುನೀರಾಗಲಾಗ ಜಗದ್ಗುರು ।॥
ಧೀರನು ಹಸದ್ವಜನನಾಗ್ಗಿ ಕಳ್ಳಿಯೊಳಗಿಂ । ನೇರಾಗಿ ಬರುವುದಂ
ಹುಡುಕುತಿಹ ಪರಿವಾರ ॥ ದೂರದಲಿಕಂಡು ಭರದೋಡಿ ಬಂದಿನಿತು
ತೊಯ್ಯದ ಗಾಯುಗೊಳ್ಳದನನು ।॥ ೬೩ ।॥

ನೋಡಿ ಜನಗೂಡಿ ಕೊಂಡಾಡಿ ಕರೆದೊಯ್ದು ನಲಿ । ದಾಡಿ
ಯಪ್ಪಣೆಯಂತೆ ಜಂಗ್ರಮ್ಮಾರಾಧನೆಯ ॥ ಮಾಡಿ ತಾಪಸವರೇಣ್ಯಗೆ
ಕಾಣಿಕೆಯನು ಮನವಾರೆ ನೀಡಿ ಕೃಪೆಯನ್ನು ।॥ ಮಾಡು, ತಿಳಿ
ಯದೆ ಮಾಡಿದಂತ ತಪ್ಪನೆಣಿಸದೆ, । ಮೂಢರನ್ನು ಪೊರೆಯುವ
ದೆಂದಡಿಗಡಿಗೆರಗುತೆ ॥ ಬೇಡಿಕೊಳ್ಳುವ ಭಕ್ತರನ್ನನುಗ್ರಹಿಸಿ ಪರಿ
ವಾರವೆರಸಿ ತೆರಳಿದನು ।॥ ೬೪ ।॥

ಬೀರೂರು ವೀರಶೈವ ಸಮಿತಿಗೆ ಬಂದ ಕೇ । ದಾರ ಪೀಠೇಶ
ನನು ಸಂಭಾವಿಸುತೆ ಗುರುವು ॥ ದಾರಪೀಠಾದಿಯಿಂ ಬಂದಿರುವ
ಗುರುಪರಂಪರೆಯು ಮನಕಂಟುವಪರಿ ।॥ ಯೋರಂತೆ ಬೋಧಿಸುತೆ
ಮುಂದಣಧಿಕಾರಿಯುರು । ವೀರಮಾಹೇಶನಿಂತಹವನೆಂದಾತನಧಿ ।
ಕಾರವಾಣಿಯೊಳಪ್ಪಣೆಯ ಪತ್ರವ ಬರೆಸಿ ಕಳಿಸಿದನಲ್ಲಿಯರಸನಿಗೆ
।॥ ೬೫ ।॥

ವಿಶ್ವಲಿಂಗ ಗುರುವರನಾರೋಗ್ಯವತ್ಯಳಿಯೆ । ವಿಶ್ವಮಯ
ವಿಶ್ವನಾಥನೊಳೈಕ್ಯಮಂ ಪೊಂದೆ ॥ ವಿಶ್ವವರಿಯಲು ಸಿದ್ಧಲಿಂಗ
ಯತಿಯು ನಿಜದೇಶದ ರಾಜ್ಯಕಾರ್ಯದೊಳಗೆ ।॥ ವಿಶ್ವತೋಮು
ಖರೆನಿಪಧಿಕೃತರ್ಧ ಜಗದೊಳಗತಿ । ವಿಶ್ರುತರ ಸಮ್ಮತಿಯ ಲೇಖವಂ
ಟೆಹರೀನ ॥ ರೇಶ್ವರಗೆ ಕಳುಹಲವನಪ್ಪಣೆಯ ಲೇಖವು ಬರಲು
ಕೆಲಪ್ರಮುಖರೊಡನೆ ।॥ ೬೬ ।॥

ನೀಲಲಗಲಲಿಂಗನನು ಕೇದಾರ ಪರಮಮಠ । ಕಾಲಸ್ಯವಿಲ್ಲದ ಕಳುಹಿಯಥಾವಿಧಿ ಅಲ್ಲಿ ॥ ಲೀಲೆಯಿಂದವಟೋತ್ತಮನಿಗೆ ಪಟ್ಟಾಭಿಷೇಕವನಾಗೆ ದೊರೆಗಳಿಂದ ।॥ ಮೇಲೆನಿಪ ಕತ್ತುರಿಯ ತಿಲಕ ವುರುರಾವಲಂ । ಬಲ್ಲಲಿತ ಪದವಿಬರೆ ನಿರ್ಬಾಧವಾಗಿಯಾ ॥ ಕಾಲದೊಳು ಸಂಸ್ಥಾನವೀಶಪೂಜಾ ಬಲದಿಸುದ್ಧರಿಸಿದನು ಯಮಿಪನು ।॥ ೬೭ ।॥

ತಾಯೆಯೆಮ್ಮನು ಕಾಯಬೇಕೆಂದು ಬಕುತಿಯಿಂ । ಬಾಯಬಿಡುವ ಬಕುತನನು ಕೃಪೆಯಿಂ ನೋಡಿ ಬಲು ॥ ಮಾಯಮಮತೆಯೊಡನವನು ದರಿದ್ರನಿರೆ ಧನದನಂ ಮೂಕನಿರೆ ವಾಗ್ಮಿಯ ॥ ನಾಯಾಸವಿಲ್ಲದಲೆಮಾಡಿ ಲೋಕದೊಳಾರು । ತಾಯಿಗೆ ಮಮತೆಯಲ್ಲಿ ಸರಿಬಾರರೆಂಬುವದ ।॥ ಪಾಯೆವಿಲ್ಲದಿಹ ಜನವಾಂತ ಪಾರ್ವತಿ ಕೃಪಾವತಿ ಮಾಳ್ಕಿಮಗೆ ಸುಖವನು ।॥ ೬೮ ॥

ಇದು ಶ್ರೀ ಪಂಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ. ಸಿದ್ಧಲಿಂಗವಿಜಯ. ಪುರಾಣದೊಳಾ
ರನೆಯ ಸಂಧಿ ಪದಂ ೬೮ ಕ್ಕಂ
ಮಂಗಲಮಸ್ತು.







## — ಏಳನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ— ಕೊಳದೊಳರಸಂಚೆಯಂತೆ ವರಗುರುಶಿಷ್ಯ ಜಗ।
ದೊಳಗೆ ಸಂಚರಿಸುತ್ತ ಬುಕ್ಕಾಂಬುಧಿಯ ಬದಿಗೆ ॥
ಹೊಳೆವ ಗಿರಿಯಲಿ ಸಲೆ ತಪವಗೈದು ರಂಭಾಪುರೀ
ಪಟ್ಟಗಟ್ಟಿದ ಯಮಿ ॥೦॥

ಪಾತಕವನೇಕ ಮಾಡಿದರು ಮರಣದಾಸಮಯ । ವಾತುರಿಸಲು ಶಿವಯೆಂದು ನುಡಿದಸುಬಿಟ್ಟಹ ॥ಶ್ವೇತನಿಗುರು ಗಣಪದವಿತ್ತ ನಿನ್ನಯ ಮೋಹವು ಶಿವಪದದೊಳೆನಿತೆಂದು ॥ ಶಾತಪೇಳಲಿ ನಿತ್ಯ ನುಡಿವನಂ ಉಪದೇ । ಕತೆಯಿತ್ತು ನಿನ್ನಂತೆ ನೆರೆಮಾಡಿಕೊಂಬ್ಬುತಿಹೆ । ಶೀತಕರ ಶೇಖರನೆ ನಿತ್ಯನೆನೆವ ಮನಗೊಟ್ಟೋತ್ತೆನ್ನ ಪೊರ್ಕ್ಷಿ ಪುರಹರ ॥ ೧ ॥

ಬೀರೂರು ಸಭೆಯೊಳಗೆ ಮನದೊಳಗೆ ಸಲೆ ದೂರ । ಬೇರೂರಿದ ವಿರಕ್ತಪಕ್ಷ ವಿಷವೃಕ್ಷ ಬ । ಳ್ಳಾರಿದೇಶದ ಚನಂಗಿಯ ಪರ್ವತಪ್ಪನೆಂಬ ಹಟಮಾರಿ ನರನ ಕರ ॥ ತಾರೆಂದು ಚರನನ್ನು ಕಳುಹಲಾ ಚಳವಳಿಯ । ಕೋರನ ಮುಖವ ನೋಡೆನೆಂದು ತಿಳಿಗೇಡಿ ರಡು ॥ ಸಾರಿ ಹಿಂದಕ್ಕಟ್ಟಲು ಮಗುವಿದ್ದೆಡೆಗೆ ತಾಯಿಯಯೊಲು ಗುರುವವನೆಡೆಗೆ ॥ ೨ ॥

ಬರಲು ಬಡವನೆಡೆಗೆ ಸಿರಿಯುತಾನೆ ಬಂದೊಲೆಂ । ದರಿದೆದ್ದು ಪದಕೆರಗಿ ಗೌರವಿಪುದಂಬಿಟ್ಟು ॥ ಬರಿದೆ ಶುನಕನಪರಿ ಬೊಗಳಿ ಮೊಗವ ಮುಚ್ಚಿಕೊಂಡುದನು ನೋಡಿ ಮನಸೊಂದು ॥ ಸುರಿದು ತಲಿ ಹಾಗಾಗಲೆಂದು ತಿರಿಗಿದನು ಚರ । ವರನು ಮುಂದೈದುತಿಂಗಳ ಲಂಧನಾಗಿ ಪರಿ ॥ ಪರಿಯ ದುಃಖವನನುಭವಿಸಿ ಯಮನಪುರಿಗೈದಿದ ಬರಿಸೊಂದರೊಳಗವನು ॥ ೩ ॥

ಬಂಣದಃರುಸಾವ್ಯದಿಂದ ಪತಂಗ ದೀಪವನು । ಪಂಣೆಂದೆರಗಿಯುಸುಬಿಡುವೊಲು, ತೋಳವಗಿನಿಯು ॥ ಸಂಣಲ್ಲದಿಹ ಕೆಂಡವನು ಕಂಡವೆಂದಗಿದು ಬಾಯ್ಸುಟ್ಟು ಬಳಲುವಂತೆ ॥ ಕಂಣುಮೊದಲಾದ್ವರಿಂ ತನ್ನಂತಿರುವನೆಂದು । ನುಂಣಗೆ ತಿಳಿದು ನರನು ಭೂಮಿಮಂಡಲದ ಮು ॥ ಕ್ಕಂಣನಂತಿರುವ ಗುರುವರನ ಪಳಿದು ಸುಕೃತವಳಿದು ದುಃಖಕೀಡಾಗುವ ॥ ೪ ॥

ಎಂದುಜನವೃಂದವು ಕುವಲಯಕಾನಂದ ಕೊಡು । ವಿಂದುವಪ್ಪ ಯಮೀಂದ್ರನಂ ಸ್ತುತಿಸಿ ದಂಡವ ॥ ದ್ವಂದಿಸಿ ಯಥೋಚಿತಹ ಕಾಣಿಕೆಯನಿತ್ತು ಕೃಪೆಯನ್ನು ತೆತ್ತದು ಬೀಳ್ಕೊಡ ॥ ಲಂದಿತ್ತ ಪರಿವಾರ ಸಹಿತನಾಗಿ ಸಲೆ ನಾ । ಗೇಂದ್ರಾಭರಣನಂ ಮನದಲಿ ನೆನೆಯುತೆ ಮೋದ ॥ ದಿಂದ ಮಧುಕರವೃತ್ತಿಯಿಂದಾಚರಿಸಿದನತನು ಹರನು ವಿಜಿತತಾಪನು ॥ ೫ ॥

ಶಿವನಿರೂಪವನಾಂತು ಸೋಮೇಶಲಿಂಗದಿಂ । ದವತರಿಸಿ ಸಿದ್ಧಾಂತಮತವ ನೆಲೆಗೊಳಿಸಿ ಪರಿ ॥ ಭವಿಸಿ ಖಲರನ್ನು ರಂಭಾಪುರೀಸಿಂಹಾಸನದಿ ರುದ್ರಮುನಿಯನಿರಿಸಿ ॥ ಭವಹರನು ರೇವಣನು ಲಿಂಗದೊಳಗೆ ಬಯಲಾ । ಗವನಿಂದಲೀವರಿಗೆ ಹರಿಪೀಠವೇಳ್ದಿದಗು ॥ ರುವರರುರೆ ನೂರುಪದಿನೆಂಟಾಗ್ವರು ಬಿರುದಗಳಿಂದ ಮೆರೆದವ್ವಳ್ದು ಜಗದಿ ॥ ೬ ॥

ಮುಪ್ಪಾವರಿಸಿದ ಪಂಚಾಕ್ಷರ ಶಿವಾಚಾರ್ಯ । ರೊಪ್ಪುತಿಹ ದುಂದುಭಿಯ ಮಾಘಮಾಸದೊಳವರು ॥ ಮುಪ್ಪೊಳಲುರುಹಿದ ನೊಳೈಕ್ಯ ಪೊಂದಿದರೆಂಬ ವಾರ್ತೆಯಂ ಕೇಳಿ ಚಿತ್ತ ।॥ ಕಪ್ಪದು ಗುಡಸೆಡೆಗೊತ್ತುತೆ ಮುಂದಣ ಕೆಲಸವ । ತಪ್ಪದಲೆ ಮಾಳ್ಪದು ಚಿತವೆನುತ ಜ್ಞಾನದಿಂ ॥ ಮುಪ್ಪಾದ ಮುನಿಮಹೋದಯನು ಮೈಸೂರುದೇಶದಿ ಪಯಣವಂ ಬೆಳಸಿದ ।॥ ೭ ।॥

ತರಿಕೆರೆಯ ದೇಶದಿರುವ ಪರದುರ್ಬೋಧಕೊಳ । ಗಿರುವ ಜನ ರುಗಳು ಬಂದಿರುವ ಗುರುರಾಜನಿಗೆ ॥ ಗುರುವೈರದಿಂದಂಧರಾಗಿ ಬಂದೆರಗಿ ಕಾಣಿಕೆಯಂ ಕೊಡದಿತರೋಪ ।॥ ಕರಣಗಳುಸಹ ದೊರೆ ಯದಂತೆ ಗೈದಲ್ಲಲ್ಲಿ । ಪರಿಪರಿಯಲಿ ಕರಂ ಕಟುಕರಂತೆ ಕಾಡಿದ ರು ॥ ಕರುಣವಿಲ್ಲದೆ ಹೆರವರಿಗೆ ತಾಪಕೊಡುವದದು ಧೂರ್ತರಕುಲ ದ ಧರ್ಮವು ।॥ ೮ ।॥

ಮುಸುಗೆ ಬಲ್ಗತ್ತಲೆಯು ದಿವಸದುದಯದೊಳಾಗ । ಬಿಸಿಗ ದಿರನಂಜುವನೆ ಬಿರುಗಾಳಿ ಬಲುಸೆಳೆಯೆ ॥ ವಸುಧೆಯೊಳು ಭೂಧರ ವು ಗಿಡದಂತೆ ನಡುಗುವದೆ, ನೊಸಲಗಂಣಿನೊಲಿರುವ ತಾ ।॥ ಪಸವ ರೇಣ್ಯನವರುಪಟಳಕೆ ಸೊಪ್ಪೊಗೆಯುವನೆ । ಬಸವಳಿಯುದಸವಸ ದಿ ಮುಂದಣ ಕಜ್ಜವ ॥ ನ್ನೊಸೆದು ಸಜ್ಜುಗೊಳಿಸಲು ನಡೆದನು ಪಥದೊಳು ಬಂದ ಬಹುತರನುದ್ಧರಿಸುತೆ ।॥ ೯ ।॥

ದಾರಿಗಿರುವೊಂದೂರೊಳಗೆ ರುದ್ರಯನೆನುವತಿ । ಘೋರನೀ ಚನ ಭದ್ರವಾಣಿಯಿಂದೀತನಿಹ ॥ ಆರಿಗು ಗುರುವೆನಿಸನು ನಮ್ಮ ಲ್ಲರ ಗುರುಬೇರಿಹನಿವಗೆ ಕಾಣಿಕೆ ಕೊಡ ।॥ ಬಾರದೆಂದು ಪ್ರಬೋ ಧಿಸುತ ಪರಿವಾರಕ್ಕೆ । ನೀರುಮೊದಲಾದುದು ದೊರೆಯದಂತೆ ಮಾಡಿ ದುದ ॥ ನಾರೈದು ಯಮಿಕುಲತಿಲಕನು ಮನನೊಂದು ಬಿಸುಸು ಯ್ದು ಶಿವನಿಚ್ಛೆಯೆಂದ ।॥ ೧೦ ।॥

ಆತವಸಿಯು ಘನ ಸಂತಾಪದ ಬಿಸಿಯುಸುರದು । ನೀತನೆ ಪಸ
ರಿಸೆ ಸಹಿಸದಲೇನೆನೆ ಬಿಸಿಗದಿ ॥ ರಾತೆರದೊಳು ಪಡುವಣಗಡಲೊಳ
ಗೆಬೀಳೆ ನಕ್ಕ ನಿಶಾಂಗನೆಯ ಸುಪಲ್ಗ ।॥ ಆತಪದಕಣಗಳೇನೆನೆ
ಚುಕ್ಕಿಗಳವು ಸು । ಶ್ವೇತಗುಣದಿಂದೆಸೆಯೆ, ಕಾಡಿಗಿಮಳೆ ದಿವ
ದಿಂ ॥ ಪಾತವಾದಂತೆ ಕತ್ತಲೆಯಿರೆ ಕುಜನಸೇವೆಯೊಲು ವೃಥಾ
ವಿರೆ ದಿಟ್ಟಯು ।॥ ೧೧ ।॥

ಆರಾತ್ರಿಯೊಳಗಾ ಸುದಃರ್ಜಾತ ರುದ್ರಯನ । ಘೋರ ದುರಿ
ತಾಚಾರ ದೋಷಕ್ಕೆ ಕೊಟಿಗೆಯೊಳ ॥ ಗಾರು ಮುತ್ತಂತೆ ಹೊಳೆವ
ತ್ತುಗಳು ಹತ್ತಿಂಟು ಪಾಲ್ಪನವವುಗಳ ಕರುಗ ।॥ ಆರಾರು ಸಂಕ
ಟಕವೊದರೊದರಿ ಬಿಟ್ಟರುವ । ವಾರುಕಾಣದಸುವನು, ಮುಂಜಾನೆ
ಬಂದು ತ ॥ ದ್ವಾರ ತೆರೆದೀಕ್ಷಿಸಲು ಭಯಗೊಂಡುಬಂದೊಡೆಯಗಾ
ಳುಸುರಿದನಸವಸದಿ ।॥ ೧೨ ।॥

ಕೇಳಿಮನದೊಳು ದುಃಖತಾಳಿಯಲ್ಲಿಂದೆದ್ದು । ಭಾಳಲೋಚ
ನ ನಾಮವನುಚ್ಚರಿಸಿ ತನ್ನ ॥ ಯಾಳನ್ನು ಮುಂದಿಟ್ಟು ಬಂದು
ನೋಡಿ ಮುಖಬಾಡಿ ಯೊಡಲೊಳಗಡಗದಳಲ ।॥ ತಾಳಲಾರದೆ
ಬಂದೊಡೆಯನಡಿಗೆರಗುತ ಜೀ । ಯಾಳಿನಪರಾಧವೆಣಿಸದಲೆ ಪೊರೆ
ಯೆಂದು ಸಲೆ ॥ ಗೋಳಿಟ್ಟು ಬೇಡಿಕೊಳ್ಳುವ ರುದ್ರಯನನು, ನಿತ
ರಾಮೀಕ್ಷಿಸಿ ಗುರುವರನು ।॥ ೧೩ ।॥

ಎಲವೊ ರುದ್ರಯ್ಯನೀ ಹಲವರ ವಚನಕೆ ಬಹ । ಳೊಲೆದೀ
ತೆರದಿ ಯಾಚರಿಸಿ ಗಾಸಿಯಾದೆನೀ ॥ ಮಲಹರನ ರೂಪದ ಗುರು
ಚರರನು ಹಳಿದು ಬಂಧದೊಳಗಾಗಲು ಬೇಡೆಲೊ ।॥ ಬಲವಿರೆ
ಜುಲುಮಿಯ ಮಾಡದೆ ವಿನಯದಿಂ ಸುಜನ । ರೊಲಮಿಯನು
ಬಯುಸುತೆ ಗುರುಕುಲದಭಿಮಾನವನು ॥ ನಲಿದು ಮನದಿರಿಸುತೆ
ಸುಪಥದಲಿ ನಡೆದು ಮೃಡನ ಪೂಜಿಸೆಂದುಸುರಿದನಲ ।॥ ೧೪ ।॥

ಸುಮುಹಿಮನುರು ಹಿತೋಕ್ತಿಯಂಕೇಳಿ ಮನದೊಳಗ । ತಿಮುದ
ವಂ ತಾಳಿ ಪೂಜೆಯನೂಡಿ ಕಾಣಿಕೆಯ ॥ ನು ಮನವಾರೆ ಪಡೆದಿ
ತ್ತು ಪುರಜನರಿಂದ ಕೊಡಿಸಿ ಕರಂ ಕೃತಾರ್ಥನಾದ ॥ ಸಮಯ
ಬರೆ ಪೂಗೋಲನಾಶುಗದಪರಿ ಸಜ್ಜ । ನಮನವು ಶಿರೀಷಕುಸುಮ
ಕ್ಕಿಂತ ಮೆತ್ತನದ ॥ ದು ಮಹಿಯಲಿ ಬಜ್ಜರದಕಿಂತ ಕಠಿಣವೆನುವು
ಕ್ತಿ ಯಮಿಪರನೊಳು ರಮಿಪುದು ॥ ೧೫ ॥

ಪಟ್ಟಾಭಿಷೇಕದ ವಿಶಿಷ್ಟಕಾರ್ಯಕೆ ಗುರುವ । ರಿಷ್ಠನು ಗವಿ
ಸುತೆ ದಾರಿಗಿಹ ಬಾಕ್ಕುಂಬುಧಿ ಸು ॥ ಪುಟ್ಟಪಲ್ಲಿಯೊಳಿಳಿದು ದರ್ಶ
ನಕೆ ಬಂದಜನರಿಂ ಪಟ್ಟನಿಂತಿತೆಂಬ ॥ ಕೆಟ್ಟವಾರ್ತೆಯ ಕೇಳಿ
ದುಷ್ಟಜನರೆಸಗುವ ಕು । ಚೇಷ್ಟೆಯಿದನಂ ಸುಟ್ಟುಬಿಡದೆ ಕೆಲಸಾ
ಗದಿಡು ॥ ಗಟ್ಟಿಯೆಂದು ತಿಳಿದದರ ಗಿರಿಯೊಳು ತಪವನಾಚರಿಸಲಿ
ಕ್ಕೆ ನೆನೆಸಿದನು ॥ ೧೬ ॥

ಹಲವು ತೆರವಾದ ಗಿಡಬಳ್ಳಿಗಳ ಟೋಂಗೆಗಳ । ಉಲಿವ ಶುಕ
ಪಿಕಮುಖ ಖಗಗಳುಳ್ಳ ಬನಗಳಿಂ ॥ ಹುಲಿಕರಡಿ ಮೊದಲಾದ
ಓಂಸ್ರಮೃಗಜಾಲದಿಂ ಶ್ರೀಕರವು ಭೀಕರವೆನೆ ॥ ಸಲೆ ವಿರಾಜಿಸುವ
ಗಿರಿಯೊಳಿಹ ಗವಿಯಂನೋಡಿ । ಮಲಹರ ಪರಶಿವನನ್ನೊಲಿಸಲೀ
ಸ್ಥಲವು ಬಹು ॥ ಲಲಿತವೆಂದು ತಿಳಿದಲ್ಲಿ ತಪನಾಚರಿಪುದಕೆ ನಿಶ್ಚೈ
ಸಿದನು ತವಸಿಯು ॥ ೧೭ ॥

ಹೊತ್ತುಮುಳುಗಲು ಗುಹೆಯೊಳು ಪಸರಿಸುತಿರಲು ಬ । ಲ
ತ್ತಲೆಯು ಶಿವಯೋಗಿಯದರೊಂದು ಮೂಲೆಯೊಳ ॥ ಗತ್ತ ಕುಳಿತಿ
ರಲೊತ್ತರದಲೋಡಿಬಂದು ಹೆಬ್ಬುಲಿಗಳೆರಡವುರೆ ಗರ್ಜಿ ॥ ಸುತ್ತ
ಬಾಗಲಿಗೆ ಪತ್ತಿಕುಳಿತದನುಂ ತಿಳಿದು । ತತ್ತರಿಸದಲೆ "ಶಿವಮಯಂ
ಸರ್ವಮಿದ" ಮೆಂಬ ॥ ಸೂಕ್ತಿಯಂ ಮನದಿ ಬಗೆದು ಮಲಗಲು
ನಿದ್ರಾಂಗನೆ ಬಿಗಿಯಪ್ಪಿದಳವನನು ॥ ೧೮ ॥

ತೀಡೆ ಸುಮುಗಂಪಿನೆಳೆಗಾಳಿಯು, ರಥಾಂಗೆಯುಗ । ಕೂಡಿ ನಲಿದಾಡೆ, ಜಾರರ ತೋಳಿನಿಂದ ಸರಿ ॥ ದೋಡೆ ಜಾರಿಯರು, ಕುಮುದಿನಿಯು ಬಾಡೆ, ಜಲಜನಿಯಲಿ ರವದೊಳು ಪತಿಯನ್ನು ॥ ಪಾಡೆ ಪೂರ್ವಾಶಾವಲಯದೊಳಗೆ ಸಸುಗೆಂಪು । ಮೂಡೆ ಮೈದೊಳೆದು ಭಾವಿಕರ ಭವಪೂಜೆಯನು ॥ ಮಾಡೆ ಪರಿವಾರವಲ್ಲಲ್ಲಿ ಪುಡುಕುತ್ತ ಬೆಟ್ಟವಪತ್ತಿ ನೋಡುತ್ತಲೆ ।॥ ೧೯ ।॥

ಬರುವಷ್ಟರಲ್ಲಿ ಕಂದರ ಮಂದಿರದಮುಂದೆ । ದರಹಸನ್ಮುಖಿನಾಗಿ ಕುಳಿತಿರುವ ಗುರುವರೇ ॥ ಣ್ಯರಕಂಡು ಕಡುನೊಂದು ಬಂದರಗಿ ಜೀಯ್ಯಾ ಭಯಾವಹ ತಲದಿರುವಿರಿದು ।॥ ಸರಿಯಲ್ಲ ಗೆಳಲನೇಳಿರಿಯೂರಗೋಗುವದು । ಕರುಣಿಪುದೆನುತರಿಕೆಯವಾಳ್ವ ಪರಿವಾರ ಪೌ ॥ ರರನು ಬರುವಂತಿಲ್ಲ ನೀವೀಗ ಪೋಗಿರೆಂದು ಕಳುಹಿದನು ಯಮಿವರನು ।॥ ೨೦ ।॥

ಸಾರಸಾರಣೆಯಿಂದಲೋರಣವೆನಿಸುವಲ್ಲಿ । ತೀರ ಚಿಕ್ಕದಹ ಮುಕ್ಕಂಣನ ಗುಡಿಯ ಜಗುಲಿ ॥ ಲೋರಂತೆ ಪಾಸಿದ ಮೃಗಾದನದ ಚರ್ಮಾಸನದಿ ಮಡಗಿರೆ ಬಲದೆಡೆಗೆ ।॥ ವಾರಿಪೂರಿತ ಪಾತ್ರಕೋಮಲಾಚ್ಛಿದ್ರ ಬಿ । ಲ್ವೋರು ಪರಿಮಳದ ಸುಮತಟ್ಟೆಗಳನು ಸುವಿಮಲ ॥ ನೀರಿನೊಳು ಮಿಂದಂತುಕೌಪೀನಗಳನುಟ್ಟು ಪಾದುಕೆಗಳನ್ನು ಮೆಟ್ಟಿ ।॥ ೨೧ ।॥

ಬಂದಾಸನದೊಳು ಪದಪಿಂದ ಪದ್ಮಾಸನದಿ । ಚಂದವಾಗಿ ಕುಳಿತುರು ಪೂರ್ವಾಂಗವದು ದಂಡ ॥ ದಂದದಿಂ ನಿಡಿದಾಗಲೆರಡಂಸಗಳು ಸನ್ನಮಿತಗಳಾಗೆಡಗೈತಲ ।॥ ವೊಂದೆಡದೊಡೆಯೊಳು ಪುಟ್ಟಿದ ಪದ್ಮದಂತಿರಲ । ಮಂದದಿಂದೊತ್ತೇರಿಸಿ ತವೆ ಕಟ್ಟಿರೆ ಜಡೆಯು ॥ ಬಂಧುರ ಭಸಿತದ ತ್ರಿಪುಂಡ್ರಗಳು ರುದ್ರಾಕ್ಷ ಸರಗಳಂಗದೊಳೊಪ್ಪಿರೆ ।॥ ೨೨ ।॥

ತಾರೆಗಳವುಗ್ರ ಸ್ತಿಮಿತಗಳಿರೆ ಹುಬ್ಬಿನ ವಿ । ಕಾರವಡಗೆ
ಯವಿಗಳ ಸಾಲು ನಿಷ್ಪಂದಾಗಿ ॥ ತೋರೆ ಕೆಳಮುಖಗಳಾದ ನಯ
ನಗಳಿಂದ ನಾಸಾಗ್ರ ವೀಕ್ಷಿಸುತೊಳಗೆ ವಿ ।॥ ಹಾರಿಸುವ ಗಾಳಿಯ
ನಿರೋಧದಿಂ ವರ್ಷಿಸದ । ನೀರದವೊಲು, ತೆರೆನೊರೆಗಳಿರದಿಹ ಸಲಿ
ಲದಾ ॥ ಧಾರದಂತೆ, ನಿವಾತದೀಪದಂತೆ, ಕರಂ ವಿರಾಜಿಸಿದನು
ತಪೋಧನ ।॥ ೨೩ ।॥

ತಲೆಗೂಪಲಗಳ ತಗ್ಗುಗಳಿಂದ ಹೊರಹೊಮ್ಮು । ಲಲಿತ ಧೂ
ಮಾಂಶದಿಂದಲನಃವಾಸಿತ ತಪೋ ॥ ನಲನಪೆರ್ಚುಗೆಯೊಳುಜ್ವಲಿ
ಸುತೆ ನವದ್ವಾರಗಳೊಳು ವಿನಿಷಿದ್ಧವೃತ್ತಿ ।॥ ಮಲವಿಲ್ಲದ ಮನವ
ನು ಹೃತ್ಸ್ಥಾನದೊಳಗಿರಿಸಿ । ಸಲೆ ತಪೋಃಬಲಕೊಲೆವ ನೀಲಗಲ
ಕೃಷ್ಣಪಿಂ ॥ ಗಲ ಪರಶಿವನನು ತನ್ನೊಳಗೀಕ್ಷಿಸುತೆ ತಪವನಾಚರಿಸಿ
ದನು ಪರಮನು ।॥ ೨೪ ।॥

ಯೋಗಿರಾಟ್ ಶಿವಯೋಗವನು ಮುಗಿಸಿ ಗವಿಯ ಮುಂ ।
ಭಾಗದಿರುವ ಶಿಲಾತಲದೊಳು ಮಂಡಿಸಿರುತಿರ ॥ ಲಾಗ ನೀಗ್ರೋಡ
ವಂ ಪೆಗಲೊಳಿರಿಸಿ ಸುಮಪತ್ರಗಳ ಬುಟ್ಟಿ ಕರದಿ ಧರಿಸಿ ।॥ ಬೇಗನೆ
ಬರುತ್ತಿರುವ ಸೇವಕನು ಕಂಡು ಬೆರ । ಗಾಗಿ ಗುರುವೆಯಿದು ಹೆಬ್ಬು
ಲಿಯಿಲ್ಲಿಯೆ ಕುಳಿತಿದೆ ॥ ಹೇಗೆ ಬರಲೆಂದೊದರುವವನನು ನೋಡಿ
ಯುದನಂ ಕೈಸನ್ನೆಯಿಂ ಕಳುಪಿದ ।॥ ೨೫ ।॥

ಏನಿದಚ್ಚರಿ ಸಚ್ಚಿದಾನಂದಘನ ಯಮಿಯ । ಮಾನವತನ
ಕೆ ಮೀರಿದ ಮಹಿಮೆಯು, ಹುಲಿಯು ಕೈ ॥ ಕೂನದಿಂದಾಳಿನೊಲು
ಪೋದುದಲ, ಹಿಂದೊಂದುದಿವಸ ವಾಯುವಿಹಾರಕೆ ।॥ ಕಾನನದಿ
ಸಂಚರಿಸುತಿರೆ ಹಸಿದ ಹುಲಿಯು ಸೈ । ತಾನದಂತೋಡಿ ಬರುವದ
ನುಕಂಡು ಮುನಿಪನು ॥ ತಾನಂಜದಲೆ ಸುಮ್ಮನೆ ನಿಲುತಿರೆ ನೋಡಿ
ಯೋಡಿತು ಬಾಲವಲ್ಲಾಡಿಸಿ ।॥ ೨೬ ।॥

ಹೀಗೆಂದು ಬಾಗಿಲೊಳಪೊಕ್ಕಲ್ಲಿ ಕೊಡವನ್ನು । ಬೇಗದಿ
ಕರಂಡವನ್ನಿಟ್ಟು ಪದಯುಗಕೆ ಶಿರ ॥ ಬಾಗಿ ಪೊಡಮಟ್ಟಾಜ್ಞೆ
ಯಂತೆ ಕಸಗುಡಿಸಲೊಳಪೋಗೆ ಬುಸ್ಸೆಂದು ಬರುವ ॥ ನಾಗಯು
ಗವಂ ನೋಡಿ ಬೆದರಿಬೆಂಡಾಗಿ ಬಂ । ದಾಗ ಜೀಯ್ಯಾ ಹಾವುಹಾ
ವೆಂದು ತೊದಲಿಸುತೆ ॥ ಕೂಗುತಿಹ ರೇವಣಾಯ್ಯನ ವಿಕಾರವನು
ನೋಡಿ ನಸುನಕ್ಕು ಗುರುವರನು ॥ ೨೭ ॥

ಬೆದರದಿರವೇಸು ಮಾಡುವವಯ್ಯ ಬಾಯೆಂದು । ಪದುಳ
ದಿಂ ಕೈಪಿಡಿದು ಕರೆದೊಯ್ದು ನಾಗಯುಗ ॥ ವದರದಲೆ ನೋಡಿ
ನೀವೀಗಿಲ್ಲಿರದೆ ಪೋಗಿಯೆಂದು ಕೈಸೊನ್ನೆಯಿಂ ಮಾ ॥ ಡಿದೊಡ
ವಲ್ಲಿಯೆ ಮಾಯವಾದವು ಸಮಸ್ತ ಭೂ । ತದೊಳಿರುತಿಹಾತ್ಮ ತನ್ನ
ಲ್ಲಿಯಾತ್ಮವಭಿನ್ನ ॥ ವಿದೆಯೆಂದು ಸನ್ನಿಯಿಂ ತಿಳಿದ ಪುರುಷ ಪುರು
ಹೂತಗೆ ತರತಮತನವೆಲ್ಲಿ ॥ ೨೮ ॥

ಮಾಸಗಳು ನಾಲ್ಕಾಗೆ ಮುನಿಗೊಂದು ದಿವಸದೊಳು । ಲೇಸ
ನಿಸುವ ಸಮಾಧಿಯಿಂತ್ಯಾವಸರದೊಳಾ ॥ ಕಾಶವಾಣಿಯು ಮುನಿ
ಪನೆ ಮನೋರಥವು ಫಲಿಸಿತೆಂಬುದಂಕೇಳಿ ಬಲು ಸಂ ॥ ತೋಷ
ವಂತಾಳಿ ನಿಯಮವನುಳಿದು ಬಂದುಹೊರ । ಗಾಸನದಿರಲವನಂ
ಕಂಡೆರಗಿ ಭಕ್ತರು ॥ ಲ್ಲಾಸದಿಂ ಮೈಸೂರರಸನಪ್ಪಣೆಯನವರಿ
ಕೆ ಮಾಡಿಪೋದರು ಗಡ ॥ ೨೯ ॥

ಬುಕ್ಕಾಂಬುಧಿಯ ಭಕ್ತರುತ್ಕಟದ ಭಕ್ತಿಯಿಂ । ದೊಕ್ಕಟ್ಟ
ನಿಂ ಬಂದನುಷ್ಠಾನದ ಕೊನೆಯೊಳು ॥ ಲೆಕ್ಕವಿಲ್ಲದ ಗಣಾರಾಧನೆ
ಯಮಾಡಿ ಸುಯಶೋವಂತರಾಗುತೆ ಭುವಿ ॥ ಮುಕ್ಕಣ್ಣನಾದ
ಮುನಿಮೂರ್ಧನ್ಯನನ್ನು ಪ । ಲ್ಲಕ್ಕಿಯೊಳು ಕೂಡಿರಿಸುತೆ ಮಹೋ
ತ್ಸವದೊಳೂರೊ ॥ ಳಕ್ಕರದಿ ಕರೆತಂದು ಸುಣಬಣದಿನಲಂಕೃತ
ಸದನದೊಳಿರಿಸಿದರು ॥ ೩೦ ॥

ಲೋಕಮಾನ್ಯನಹ ತಾಪಸಪುಂಗವನನು ಭುವಿ । ಸಾಕಾರ ಶಿವನೆಂದು ನನ್ನಿಯಿಂದ ತಿಳಿಯುತೆ ॥ ಬೇಕಾದವನು ಬಿನ್ನಹವನು ಗೆಯ್ದು ಕರೆದೊಯ್ದರ್ಚಿಸುತೆ ಶಕ್ತಿಮೀರಿ ॥ ಸಾಕಾಗುವಷ್ಟು ಕಾಣಿಕೆಯನಿತ್ತುಪಚರಿಪ । ನೇಕಭಕ್ತರ ಭಕ್ತಿಯಂ ಗುರುವರೇ ಣ್ಯನು ॥ ಸ್ವೀಕರಿಸಿ ವಿಶ್ರಾಂತಿಸುಖಸುಧಾಸ್ವಾದನದೊಳಿರುತಿರ್ದ ನೊಂದುದಿವಸ ॥ ೩೧ ॥

ಸಾಯಂ ಸಮಯದೊಳೋರ್ವ ಶಿವಭಕ್ತನುರುಗುರು । ರಾ ಯನಡಿಗೆರಗಿ ಬಿನ್ನಹವಿತ್ತು ಮನೆಗೆ ಬಂ ॥ ದಾಯತಾಕ್ಷಿಗೆ ಪೇಳಿ ರಾತ್ರಿಯೊಳು ಸಾಮಗ್ರಿಯಂ ಸಿದ್ಧಗೊಳಿಸಿ ಕುಸುಮ ॥ ಸಾಯ ಕನೊಲಿದ್ದೈದುಬರಿಸದ ತನೂಭವನ । ಕಾಯದೊಳು ಸಂತಾಪವಂ ಕಂಡು ನೊಂದದರು ॥ ಪಾಯವಂ ಮಾಡುತ್ತ ಮುಡಿಯಿಂದಡಿಗಿ ಯ ಮಾಡಲು ಮಡದಿಗುಸುರಿದನವ ॥ ೩೨ ॥

ಪಾಕವಂ ಪೂರೈಸಿಬಂದತಾಯಿಯ ನೋಡಿ । ಶೋಕವುರೆ ಬಿಕ್ಕಿ ಕಣ್ಮುಚ್ಚಿ ಬಿಡಲಸುವ ತಿಳಿ ॥ ದಾಕೆ ದೊಪ್ಪನೆಬಿದ್ದು ಮತ್ತೆ ದ್ದು ತತ್ತನುವ ತೋಳ್ಗಳಿಂ ಕೊಡೆಯೊಳು ಬಲು ॥ ಜೋಕೆಯಿಂ ದಿಟ್ಟು ಮುದ್ದಿಟ್ಟು ಮೊಗಮಂ ಹಸ್ತ । ದಿಂ ಕದಪುಗಳಲುಂಗಿ ಮೇರೆದಪ್ಪಿ ಬರುವಳ ॥ ಲಂಕರಂ ಸಹಿಸಲಾರದವಳತ್ತಳು ಪುತ್ರ ದುಃಖವಂತಹುದು ಜಗದಿ ॥ ೩೩ ॥

ಹಾಮಗುವೆ ಹಾಮನ್ಮನಸ್ಸರೋಹಂಸವರ । ಹಾಮುದ್ದು ಮುಖನೆ ಹಾಮದ್ವಂಶಮೌಕ್ತಿಕನೆ ॥ ಹಾಮನೆಯಮಂಡನನೆ ಮ ನಸಿಜಮನೋಹರನೆ ಹಾಕುಸುಮ ಸುಕುಮಾರನೆ ॥ ಸೋಮನಂತಿ ರುವ ಗುರುವಿನ ಪಾದವಾರಿಯ । ಪ್ರೇಮದಿಂ ಸಲಿಸಿಯವರೊಡ ನುಂಡು ಕಾಣಿಕೆಯ ॥ ನಾಮಹಿಮಗಿತ್ತು ಕೃಪೆಯಂ ಪಡೆವಿಯೆಂ ದಾಶಿಸಿದ್ದೆನೆಲೆ ಮಗನೆ ಮಗನೆ ॥ ೩೪ ॥

ಬಿದಿಗೆಯ ವಿಧುವಿನಂತೆ ದಿನದಿನದಿ ಬೆಳೆದು ಬಹ । ಳಧನ ವಂಗಳಿಸಿ ಗುರುಜಂಗಮರನರ್ಚಿಸಿ ಸು ॥ ಬುಧರನೌದಾರ್ಯದಿಂ ಮೆಚ್ಚಿಸಿ ಮನೆತನದ ಜಸವ ಹೆಚ್ಚಿಸೆಮ್ಮಗೆ ನೀ ।॥ ನದರದಸುಖ ವನನುಭವಿಸಿ ಪರಮಶಿವನ ಪಾ । ದದಯೆಯಿಂ ಸಂಪಾದಿಸಿ ಮದ ನ್ವಯಲತೆಗತಿ ॥ ಸದಪತ್ಯ ಸುಮಗಳಿಂದಂದವೀಯುವೆ ಯೆಂದಿರ ಮರಣವೊದಗಿತು ನಿನಗೆ ।॥ ೩೫ ।॥

ಒಡನಾಡಿಗಳು ಬಂದು ಸಮ್ಮಸರಿವಯನೆಲ್ಲಿ । ಗಡನೆ ಪೇ ಳೆಂದೊಡವರಿಗೆ ನಾನು ಮರುಮಾತು ॥ ಗೊಡಲೇಂ ಜ್ವರದಹೊಡ ತಕೆ ಮಡಿದಿಹನೆಂದು ಪೇಳಲಿ, ತೊಟ್ಟಬಟ್ಟೆಯನ್ನು ।॥ ಬಿಡದಾಡಿ ದೆಡೆಗಳಂ ಮಗು, ಬಲಕ್ಕರದಲಿ । ಟ್ಟೊಡವಿಗಳನು ನಿನಗುಣಲಿಟ್ಟ ಬೆಳ್ಳಿಯ ಬಟ್ಟ ॥ ಉಡುರಾಜಮುಖನೆ ನೋಡಲೊಡಲೊಳಗೇಳು ವಳಲೆಂತು ಸೈರಿಪೆನರಗಿಳಿ ।॥ ೩೬ ।॥

ಎಂದುಶೋಕಿಸುವ ತನ್ನಿಂದುಮುಖಿಯನು ನೋಡಿ । ಮುಂದ ರಿವಳಲನು ನುಂಗುತ್ತಳುವ ಸಮಯವ ॥ ಲ್ಲೆಂದಾಕಿಯನ್ನು ಸಂತೈ ಸಿ ಬಟ್ಟೆಯಲಿ ಮಗನತನುವಂ ಮುಚ್ಚಿ ಸುಗುಣ ।॥ ಸಿಂಧುಬರೆ ಮಜ್ಜನವ ಮಾಡಿಸಲು ತಾಪಸನು । ಚಂದ್ರಧರನಂ ಪೂಜಿಸಿ ಬಳಿಕ ಮಗನನು ಕರೆ ॥ ಬಂದು ತೀರ್ಥವ ಸಲಿಸಲೆಂದುಸುರೆ ದುಃಖ ವುಕ್ಕೇರೆ ಗದ್ಗದ ದನಿಯೊಳು ।॥ ೩೭ ।॥

ತನುಜನಿಲ್ಲಿಲ್ಲ ಕೇಳ್ಗುರುವೆ ಯುವನು ಮದನಹ । ರನಡಿದಾ ವರಿಯ ಸೇರಿಹನಾತನಂ ಕರೆವ ॥ ಘನಬಲವು ನೀಲೂರು ನಿಂಬೆಕ್ಕ ನಂತೆನಗಿರುವುದೆ ಮುಗಿಸಿ ಪ್ರಸಾದ ।॥ ಕನುಮತಿಯನೀಯೆಂದು ಸುರುವ ಬಕುತನ ನೋಡಿ । ನಿನಗೇಕೆ ಚಿಂತೆಯುದರ ಬರಿದೆ ಬೆದರ ಬೇಡ ।॥ ತನಯನಂ ತಾಯೆಂದುಪೇಳಲು ಶಿವೇಚ್ಛೆಯೆಂದು ಮಗು ವಂ ತಂದಿರಿಸಿದ ।॥ ೩೮ ।॥

ಪಾದೋದಕವನು ಪರಿತಃ ಸಿಂಪಿಸಿ ಪವಿತ್ರ । ವಾದ ಜಲವಿ
ಶ್ರ ಭಸಿತವನಖಿಲಾಂಗಕ್ಕೊರಿಸಿ ॥ ಮೋದದಿಂದಮೃತ ಹಸ್ತವನು
ಹಣೆಯೊಳಗಿರಿಸಿ ಶಿವನಾಮವುಚ್ಚರಿಸುತ ॥ ಬೋಧದಾಯಕ
ಗುರುವರಘುಳಿಗಿರೆ ಬಾಲಕನು । ನಿದ್ರೆತೀರಿದವನೊಲು ಮೈಮುರಿ
ದು ಕಣ್ದೆರೆದು ॥ ಸಾದರ ಸುಭಾವದಿಂದಪ್ಪಾಯೆನುತಲುಚ್ಚರಿಸು
ತೆದ್ದು ಘುಳಿತಸವನು ॥ ೩೯ ॥

ನೋಡಿ ಹರ್ಷಾಶ್ಚರ್ಯ ತಟಿನಿಗಳ ಸಂಗಮದೊ । ಳಾಡಿ ಭವ
ಹರಿವ ಬಕುತಿಯೊಡಗೂಡಿ ಬಲುಕೊಂ । ಡಾಡಲನುವಾದನು ಮನೆ
ಯೊಡೆಯನು ಕೈದಾವರೆಗಳನ್ನು ಸಲೆಜೋಡಿಸಿ ॥ ಆಡಲೇಂ ನಿನ್ನ
ಗಾಢಮಹಿಮೆಯ ಚರಿತವನು । ಪಾಡುವಂತ ಬಲವುಳ್ಳ ಸುಬುದ್ಧಿ
ಯೆನಗಿಲ್ಲ ॥ ಮೂಢನಾದೆನ್ನನು ಜಗದ್ಗುರುವರೇಣ್ಯ ಕಾಪಾಡೆಂದು
ಬೇಡ್ವೆ ನಾನು ॥ ೪೦ ॥

ಮರೆದಾದರೊಮ್ಮೆ ಗುರುಸಿದ್ಧಲಿಂಗನೆ ನಿಮ್ಮ । ಪರಮತರ
ನಾಮವುಚ್ಚರಿಸೆ ಬೇರೂರಿರುವ ॥ ಗುರುತಮ ಭವಭಯ ಭೂತವಿರ
ದೋಡೆ ಮುಕುತಿ ಸಿರಿಯೊರೆಸುವಳವನಂ ಗಡ ॥ ದುರಿತೌಘ ಕು
ಧರಕುಲಿಶ ದುರಿತವನಾನಲವು । ದುರಿತ ಶರಧಿಬಡಬಾನಲವು ಧರೆ
ಯೊಳಗೆ ನೆರೆ ॥ ದುರಿತಾವಲಿಮದಾವಲಕರಿಕೇಸರಿಯು ಗುರುವರನೆ
ನಿಮ್ಮಯ ನಾಮವು ॥ ೪೧ ॥

ಧರೆಯೊಳು ಸುದುಶ್ಚರವಹ ತಪವಂ ಚಿರತರಾ । ಚರಿಸಲೊ
ಲೆದಂತಕನಪಾಶದಿಂದುಳಿಸಿದನು ॥ ಪುರಹರನುರು ಮೃಕಂಡು
ಮುನಿತನೂಜನನೆಂದು ಪೂರ್ವಿಕರುಸುರುವರು ಗಡ ॥ ಕರುಣಾಕ
ರನೆ ತಪವನರಿಯದೈದು ಬರಿಸದ । ತರುಳನಸುವಳಿಯಲಿವನಂ
ಬದುಕಿಸಿ ಕೃಪೆಯೊಳು ॥ ಹರನಿಗಿಂತ ಗುರುವಧಿಕನೆನುವ ಪುರಾತ
ನರ ವಚನವನು ನೆಲೆಗೊಳಿಸಿದಿ ॥ ೪೨ ॥

ಮರಗೂಳನಂ ಪಿಡಿದು ಬಟ್ಟೆಯೊಳುಕಟ್ಟುವರು । ತರಣಿಯ ಗಮನವನುಂ ತಡೆಯುವರು ಕುಡಿಯುವರುರು ॥ ತೊರೆಯೆರೆಯನಂ ಭೂಗಗನಗಳಂ ಕೈತಾಳಮಾಡುವರು ಮತ್ತೆ ಜವನ ॥। ತರುಣ ಸ್ಥಿರಿ ಭದ ಕೋಡುಗಳನ್ನು ಕೀಳುವರು । ಮರಣವೊಂದಿದ ಶರೀರಿಗಿರದ ಸು ದಾನವನು ॥ ಮರಳಿಮಾಡುವರು ಧರೆಯೊಳು ಪುರಹರನ ಭಜ ಕರೇನು ಮಾಡರು ತಾಪಸ ॥। ೪೩ ॥।

ಯೋಗಿಜನವನರುಹವನ ನಭೋಮಣಿಯಹ ಶಿವ । ಯೋಗಿ ಶೇಖರನು ಶಿವಲಿಂಗ ಪ್ರಸಾದೋಪ ॥ ಭೋಗಿಯಾಗಿ ಪದುಳದಿನ ವರಿಗಾಶೀರ್ವದಿಸಿ ಸಂಭ್ರಮದಿ ಬೀಳ್ಕೊಂಡನು ॥। ರಾಗದಿಂ ರಂಭಾಪುರಿಯ ಪೀಠದಧಿಕೃತಿಯ । ನೀಗಿಸುವದಕ್ಕೆ ಸಾಗಿದನೆಂಬು ದನ್ನು ತಿಳಿ ॥ ದಾಗಲೆ ಜನತತಿಬಂದುದು ದೇಶದೇಶದಿಂ ಭೂಮಿ ಬೆಸಲಾದವೋಲು ॥। ೪೪ ॥।

ಹೊಗೆಬಂಡಿಗಳಲೆತ್ತು ಕುದುರಿಗಳು ಹೂಡಿರುವ । ಬಗೆಬಗೆ ಯ ಬಂಡಿಗಳಲಿ ವರಮೋಟಾರಿನಲಿ ॥ ಬಗೆಯೆಳಿವ ಬಾರ್ಶಿಸೊನ್ನ ಲಪೂರ ಧಾರವಾಡ ಬೆಳಗಾವಿ ವಿಜಾಪುರ ॥। ಸೊಗಯಿಸುವ ಬಳ್ಳಾರಿ ಬೆಂಗಳೂರು ಮೊದಲಹ । ಮಿಗಿಲಾದ ಪಟ್ಟಣಂಗಳ ಪುರುಷ ಪುಂಗ ವರು ॥ ಸೊಗಸಾಗಿ ಗುಂಪುಗುಂಪಾಗಿ ಸಾಗರದತೆರೆಗಳೊಲು ಬಂದರು ಭರದೊಳು ॥। ೪೫ ॥।

ಬಂದಿರುವ ಭಕ್ತವರ್ಯರ ಭೂಮಹೇಶ್ವರರ । ವೃಂದಕೆ ವಸತಿ ಮಜ್ಜನ ಸುಭೋಜನಗಳೇನು ॥ ಕುಂದುಕೊರತೆಗಳಾಗಬಾರದ ತೆರದಿ ಸುವ್ಯವಸ್ಥೆಯನು ಮಾಡಿಸುತ್ತೆ ॥। ಮುಂದರಿದು ಕಾರ್ಯ ಮಾಡುವ ಜನರ ಮನಕೆ ಬಲು । ಬಂಧುರತರೋತ್ಸಾಹವೀಯು ತಲಿ ಗುರುಪಟ್ಟ ॥ ದಂದದುಪಕರಣಗಳ ಕೂಡಿಸುವದಂದುಗವನರ ಮಾಡಿದನು ತಪಸಿಯು ॥। ೪೬ ॥।

ಮಾರುತನಮಂದಹತಿಗೊಲೆಯುವಂಬರಚುಂಬಿ । ಸಾರಕೇತು ಪಟಿಗಳು ಸಲೆ ವಿಚಾರಿಸಲು ಸುರ ॥ ವಾರಮಂ ಪಟ್ಟೋತ್ಸವಕೆ ಕರೆವವೆಂಬುವಂತವು ತೋರೆ ಭೂಭಾಗವು ।।। ಸಾರಣೆಯು ನೆಲದೊಳುರು ರಂಗವಲ್ಲಿಯು ನೆವದಿ । ಸಾರಚಿತ್ರಾಸನಾಲಂಕೃತವೆನಿಸುತಿರಲು ॥ ಚಾರುಮಂಡಪದೊಳಭಿಷೇಕ ಸರ್ವೋಪಕರಣಂಗಳು ವಿರಾಜಿಸುತಿರೆ ।।। ೪೭ ।।।

ಶೈವಸಿದ್ಧಾಂತವಿಧಿಯೊಲು ಸದಾಶಿವ ಗುರುವು । ಸೇವ್ಯ ಸುಸ್ನಾನದಿಂ ಶುಚಿಯೆನಿಸಿ ಭಸಿತದಿಂ ॥ ಭಾವುಕನೆನಿಸಿ ಕಮಂಡಲು ದಂಡಮೊದಲಾಗಿಹೈದು ಮುದ್ರೆಗಳನು ಸಲೆ ।।। ಪಾವನುರುಭಾವದಿಂ ಕೈಗೊಂಡು ಬಂದುಭವ । ದಾವಾಗ್ನಿ ಸಿದ್ಧಲಿಂಗ ಜಗದಾಚಾರ್ಯನಡಿ ॥ ದಾವರಿಗೆರಗಿ ಭೋಗುರುವೆ ಪಟ್ಟದಭಿಷೇಕದಿಂದುದ್ಧರಿಸು ಪದೆಂದ ।।। ೪೮ ।।।

ಪಂಡಿತರಮಂಡಲದ ಮಂಡನನೆ ಸಕಲ ಭೂ । ಮಂಡಲದೊಳಗಖಂಡ ಶಿವಸಮಯ ಪಾಲನೋ ॥ ದ್ದಂಡಬಲವು ಜನಸಾಮಾನ್ಯವಲ್ಲಾದರದಿನೊಂದಿ ಪ್ರತಿದಿನದಿ ಶಶಿ ।।। ಖಂಡಶೇಖರಸಂ ಭಜಿಸುತೆ ನಿಜಶಿಷ್ಯಭವ । ದಂಡಲೆಯ ಕಳೆದೆರಳಿಗಂಣಿನ ವಿಧುಮುಖಿಯರ ।। ತಂಡದಕಡೆ ಕಟಾಕ್ಷದ ಬಲಿಯೊಳಗಿನಿತಾದರೀಯದೆ ಜಸವನಾಂಪುದು ।।। ೪೯ ।।।

ವಿಷದಂತೆ ಸಲೆಬಾಧಿಸುವ ನಿಖಿಲವಿಷಯಗಳ । ವಿಸರದೊಳು ಹೊನ್ನುಹೆಂಣುರು ಮಂಣುಮೂರೆ ಸು ॥ ವ್ಯಸನಕೊಳಮಾಡುತಿಹ ವಸ್ತುಗಳವುಗಳೊಳುರೆ ಪೆಂಣುಮುಖ್ಯವಿರುವದಲ ।।। ವಸುಧೆಯೊಳುಮಾರಿಯು ಬ್ರಹ್ಮಚರ್ಯದ ಮುಕುತಿ । ಯ ಸಮಾನ ವೈರಿ, ನರಕದ ದೊಡ್ಡದಾರಿ, ಬಲು ॥ ವಿಷಮಶರನ ಸಹಕಾರಿ, ಭಜಕರಿಗಪಕಾರಿ, ವಿಷಯಿಗಳಿಗುಪಕಾರಿಯು ।।। ೫೦ ।।।

ನೋಡಿದರೆಮನವ, ಮಾತಾಡಿದರೆ ಧನವ, ನೊಡ । ಗೂಡಿದರೆ ಶಕ್ತಿಯಂ, ದೊರೆವ ಮುಕ್ತಿಯನು ಕಳೆ ॥ ಬಾಡಿಸಿ ಕಪಿಯಪಕ್ಕಿ, ಕನಿಕರವಿಲ್ಲದೆ ಸರಿಮನೆಯವರೊಳು ಮಾನಗೇಡಿ ॥ ಮಾಡಿಹ ಪರ ಸುಖಗಳ ಕೆಡಿಸಿ ಪಾಪನಿಚಯವ । ನಾಡೆ ತಲೆಯೊಳುಜೋಡಿಸಿ, ಕಡಿಗೆ ಯಮನ ಬಾಧೆ ॥ ಗೀಡುಮಾಡಿ ಸುರಾಸುರನರವರರನು ಕಾ ಡುತಿರುವದು ಧರೆಯೊಳು ಮಾಯೆ ॥ ೫೧ ॥

ಕೇಣನಿಲ್ಲದೆ ಬೇಡಿದುದನಿತ್ತನಾರತಂ । ಪ್ರಾಣದಂತೆಮ ನಸಾ ಪೊರೆಯುವ ಕಲೆಯನರಿದು ॥ ಜಾಣತನದಲಿ ಕೂಡುವ ಪ್ರಾಣದೊಡೆಯನಂ ತೃಣದಕಿಂತ ಕಡಿಯಾಗಿ ॥ ಕಾಣುತ ಮನ ದೊಳನ್ಯತರುಣನಂ ಭೂಪಂಚ । ಬಾಣನೆಂದು ತಿಳಿದವನೊಡನೆ ಕೂಡಲನುವಂ ॥ ಮಾಣದಲೆ ಮಾಡುವ ಮಹಿಳೆಯನು ಕ್ಷೋಣಿ ಯೊಳಗಾವ ಜಾಣನು ನಂಬುವ ॥ ೫೨ ॥

ಕೋಡಿಯೊಡೆಯುವಹಾಗೆ ತುಂಬಿತುಳುಕುವಕೆರೆಯ । ನಾಡೆ ನೀರುಕುಡಿವದು ಬಿಟ್ಟರೆಗೊಡದ ಜಲವ ॥ ನೋಡಿಬಂದು ಕುಡಿ ಯಲು ಕೂತಾತುರಿಪ ಕಾಗಿಯಂತೆ, ಮನೆಯೊಳು ಮಡದಿಯು ॥ ನೋಡೆರೂಪವತಿಯು ಗುಣವತಿಯನುಕೂಲೆಯಿರೆ । ರೂಢಿಯೊಳವ ಳನಳುಕದಲೆ ಬಿಟ್ಟಿತರಳನ್ನು ॥ ಕೂಡುತಿಹಕುಲಗೇಡಿ ನರನ ತಿಳಿ ಗೇಡಿತನಕೆ ಬುಡವಿಲ್ಲ ಕೊನೆಯಿಲ್ಲ ॥ ೫೩ ॥

ಹಿಣಗಿಕಣಕಣವೆನಿಪೆನಿತೆನಿತುವು, ಸಾರಿರದ । ಪೆಣದೆಲುವ ಕಡಿಕಡಿದು ತನ್ನ ಪಲ್ಲಿಂದಿಳಿವ ॥ ಕಣ ರೂಪಲಾಲಾಜಲದೊಳು ಸವಿಯನರಸದೆ ಕೀಕಸದಲುಂಟೆಂಬುವ ॥ ಸೊಣಗದಪರಿ ಮನ ದೊಳು ವನಿತೆಯ ರತದಲಿ ಸುಖ । ವೆಣಿಸಿಯದರೊಳು ಬಲು ಮು ಣಿಮುಣಿಗೇಳುವ ಮನುಜ ॥ ನಣುಮಾತ್ರತಿಳಿಯನಲ ತನ್ನ ರೇತ ಸ್ಸ್ಖಲನದಲ್ಲುಂಟು ಸುಖವೆಂಬುದು ॥ ೫೪ ॥

॥ ಶ್ರೀಜಗದ್ಗುರು ರೇಣುಕಾಯ ನಮಃ ॥



ಲಿಂಗೈಕ್ಯ
ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ
೧೦೦೮ ಜಗದ್ಗುರು
ಶಿವಾನಂದ ರಾಜೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳು.

ಈಳಿಗನು ಕೊಯ್ತ್ತದಿಂ ಕೆತ್ತಲು ರಸವಿಳಿದಿಳಿ । ದಾಲಸ್ಯವಿಲ್ಲದೀಚಲೊಣಗುವ ಪರಿ ಜಗದಿ ॥ ಬಾಲೆಯರ ಲೀಲೆಯೊಳು ಲೋಲನಾಗಿ ದಿನದಿನ ರೇತಃಪತನದಿಂದಲಿ ॥। ಕೇಳವನ ಶಕ್ತ್ತಿಯದು ಹಾಳಾಗಿ ಹಸ್ತದಿಂ । ಕೋಲೂರಿ ನಡೆವ, ದಂತಗಳುದುರುವವು, ಕಿವಿಯು ॥ ಕೇಳದದು ಕಂಣು ಕಾಣದಕಾಲದಲಿ ಕಾಲನೆಡೆಗವನು ಪೋಗುವನಲ ॥। ೫೫ ॥।

ಬಿಂದುವೊಂದಚಲವಿರೆ ಮಾನವಗೆ ಭುವಿಬಾರ । ದೆಂದೆಂದು ರೋಗರುಜೆಯಿಂದುಧಂನ ಕಲೆ, ವದ ॥ ನೇಂದುವಿನಲಿ ನಿಲುವುದು ಕಾಯದುರುಕಾಂತಿ ಕೈವಿಾರುವದು, ನೇತ್ರಾದ್ಯಖಿ ॥। ಲೇಂದ್ರಿಯಗಳ ವಿಷಯಗ್ರಹಣಶಕ್ತ್ತಿಯೆನಿತವು । ಕುಂದದದು, ಶಾಪ ಪ್ರಸಾದಬಲವಿಹುದು ಸುಖ ॥ ದಂದವು ನಿರುತನಂದದು ಕೆಲಸವು ಕೈಗೂಡುವದು ಶಾಂತಿ ನಿಲ್ಲುವದಹೊ ॥। ೫೬ ॥।

ಒಡಲೊಳಿಹ ದುಃರ್ವಾರವೈರಿ ಷಡ್ವರ್ಗವನು । ಬಿಡದೋಡಿಸಿದುದಾರ ಪುರುಷ ಪ್ರಕಾಂಡನಿಗೆ ॥ ಪೊಡವಿಯೊಳಗಿಹ ವೈರಿವರ್ಗ ಪರ್ವತಭೇದನವು ಭುವನದಿ ಸುಲಭನೊಲು ॥। ಕಡು ಸುಲಭವೆನಿಸಿದರುದಾಸೀನನಾಗಿರದೆ । ಬಿಡದೋಡಿಸುವದುಣುವೆಡೆಯೊಳಿಹ ನೊಣಗಳಂತೆ ॥ ಗಡನಡನು ಮಾಡದೊಡೆ ಪರಪಿಂಡಪುಷ್ಟರುಗಳುಂಡುದನು ಕಕ್ಕಿಸುವರು ॥। ೫೭ ॥।

ವೈದಿಕರ ವೇದಘೋಷಗಳಿಂದ ಪಟಹಾದಿ । ವಾದ್ಯಗಳುಮೊಳಗುತಿರೆ, ಶಾಲಿವಾಹನಶಕದ ॥ ವೇದ್ಯವಹ ಪದಿನೆಂಟುನೂರು ನಾಲ್ವತ್ತೇಳರ ಕ್ರೋಧವತ್ಸರದ ಸು ॥। ಬೋಧ ಮಾರ್ಗಶಿರ ಶುದ್ಧ ಶುಭ ಸಪ್ತಮಿಯ ರವಿ । ಸಾಧುವಾರದೊಳು ಸದ್ಧರ್ಮಪೀಠಪನುಪ ॥ ಸಿದ್ಧವಹ ವೀರಪೀಠದ ಕಿರೀಟವಧರಿಸಿ ಮುದ್ರೆಯನು ಕೊಟ್ಟನು ಯಮಿ ॥। ೫೮ ॥।

ಅಭಿನವ ಶ್ರೀ ರೇಣುಕನೆನಿಪಭಿದಾನದಿಂ । ದಭಿಶೋಭಿಸುವ ಶಿವಾನಂದ ರಾಜೇಂದ್ರನೆಂ ॥ ಬಭಿಧೇಯುಸದಾಶಿವನ ತಿರ್ಯಗಾಂದೋಲಿಕೋತ್ಸವವ ಗೈದರು ಬಕುತರು ॥। ಸಭೆಯೊಳು ಮರುದಿನ ಜನ ಕಿಕ್ಕಿರಿದು ಕುಳಿತಿರಲು । ಬುಧರಹ ಹರೀಶಶಾಸ್ತ್ರಿಗಳ ಪೆಣ್ಮಗುವಾಡು ॥ ತ ಭರದಿಂ ಬಂದುಬಿದ್ದಿತು ಮೇಲುಮಾಳ್ಗಿಯಿಂ ದೊಪ್ಪನೆ ನೆರೆದವರಾಗ ॥। ೫೯ ॥।

ಗಾವಳಿಯ ಕೇಳಿಯೈತಂದು ನಗುತಾಡುತಿರು । ವಾವಹಾನಿಯಿರದಿಹ ಹುಡುಗಿಯಂ ನೋಡಿ ಗುರು ॥ ದೇವನು ಹಸನ್ಮುಖಕಮಲನಾಗಿ ಗುರುವರರೆ ನಿಮಗೆ ಶುಭಸೂಚನೆಯಿದು ॥। ಭೂವಲಯದೊಳರಿಗಳು ಪೊಂದುವರಪಜಯುಮಂ । ಭಾವಜಾರಿಯ ಕರುಣದಿಂ ದಿಗ್ವಿಜಯದ ಗುರು ॥ ಭಾವದುರುದುಂದುಭಿ ಮೊಳಗುವದೆಂದು ಚರವರನಾನಂದದಿಂ ನುಡಿದನು ॥। ೬೦ ॥।

ಅಂಬನಿನ್ನಯ ಪದಾಂಭೋಜಯುಗಳವನು ನೆರೆ । ನಂಬಿರುವ ಶುಬಾಯುಧಮೊದಲಹ ನಿರ್ಜರ ಕ ॥ ದಂಬಕಭಯುವನಿತ್ತು ಜಗದೊಳಗೆ ನೂರ್ಮಲೆತು ಜನಕರುಂತುದರಾಗಿ ಹ॥। ಶುಂಭ ಮತ್ತೆ ನಿಶುಂಭಮೊದಲಾದ ದೈತ್ಯರ ನಿ । ತಂಬಿನಿಯರುಗಳಕಂಬನಿಗಳಿಂದವರ ಕುಚ ॥ ಕುಂಭಗಳ ಚಂದನವನಳಕಿಸಿ ಸುರರನು ಪೊರೆದಂಬಿಕೆ ಸಲಹು ಸನ್ಮನು ॥। ೬೧ ॥।

ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯು ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳೇ
೪ನೆಯ ಸಂಧಿ ಪದಂ ೬೧ ಕ್ಕಂ
ಮಂಗಲಮಸ್ತು.





## — ಎಂಟನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ— ವಿಮಲ ವಿಶ್ರುತ ಸದ್ಯಶೋರಾಶಿಭರಿತ ಗುರು । ವು
ಮಹಿಮೆಗಳನು ತೋರಿಸುತಿಳೆಯೊಳು ಬಾರ್ಶಿಪುರ ॥
ದ ಮಹಾಶಯರ ಭಕ್ತಿಯನ್ನು ಕೈಕೊಳುತಲಿರ್ದನು
ತಪೋಧನ ಪರಮನು ॥೦॥

ಗಂಗೋತ್ತಮಾಂಗ ಕರಧೃತಕುರಂಗ ತ್ರಯಿ ಶಾ । ತುಂಗತುರಗಾನಂಗಮಾತಂಗ ಹರ್ಯಕ್ಷ ॥ ಭಂಗರಹಿತ ಸುಭಕ್ತಿ ಭಾಸ್ವರ ಭಜಕ ಪೂಜಿತ ಪದಪಂಕೇಜ ಯುಗಲ ॥। ಭೃಂಗನೀಲಸುಗಲ ವಿಹಂಗಮ ವರಗಮನ ಶ । ತಾಂಗಾಂಗ ದಾನ ದಕ್ಷವಲಕ್ಷ ವರದಯಾ ॥ ಪಾಂಗ ಮಂಗಲಚರಿತ ಗಿರಿಸುತಾದತ್ತವಾಮಾಂಗ ಶಿವನೆ ಪೊರೆಯೆನ್ನ ॥ ೧ ॥

ಜ್ವರಬಂದ ನೆವದಿಂದ ಜಠರದೊಳು ಬೆಳೆದು ಭರ । ಭರನೆ ಗುಲ್ಮವು ಪರಿಪರಿಯಲಿ ಬಾಧಿಸಲೆಲ್ಲಿ ॥ ನೆರೆತೋರಿಸಿದರುಂ ಪರಿಹರವಾಗದೆ ಕತ್ತಿಬೇನೂರು ಗೌರಮ್ಮನಿ ॥। ಗುರುವಾದ ವೇದನೆಯುರಿಯೊಡಲೊಳಗದು ದಹಿಸು । ತಿರಲೊಂದುದಿನ ನೆರೆದುಕೂತ ನಾರಿಯರೊಳಗೆ ॥ ಸರಿವಯದ ಸರಸಿಜಾಕ್ಷಿಯು ಸಿದ್ಧಲಿಂಗಗುರುವಿನ ಮಹಿಮೆಯನುಸುರಿದಳು ॥ ೨ ॥

ಕೇಳಿ ಮೋದವತಾಳಿ ಮನದೊಳಲ್ಲಿಗೆ ಪೋಗಿ । ಭಾಳಲೋಚನನಂತೆ ಸುಮಹಾನು ಕಂಪಾಲ ॥ ವಾಲನಂ ಗುಣಶೀಲನಂಕಂಡಡಿಗೆರಗಿ ಕರಂ ಬೇಡಿಕೊಳಲಾಕೆಯು ॥ ಕೀಳಬೇನಿದರಪಾಡೇನು ದೊಡ್ಡದು ಕೂಡ । ಹೇಳಹೆಸರಿಲ್ಲದಂತಾಗುವದರಿಂ ಭಸಿತ ॥ ಧೂಳಿಯನು ಜಲದೊಳು ಕಲಸಿ ಕುಡಿದುಳಿದುದನ್ನು ಮೈಗೆಲೇಪಿಸೆನುತುಸುರಿ ॥ ೩ ॥

ಭಕ್ತವತ್ಸಲನಾದ ತಾಪಸನು ಭಸ್ಮದ । ವ್ಯಕ್ತ ಗಟ್ಟಿಯನು ಪರಿಶುದ್ಧಿಗೊಳಿಸಿ ಕರೆದುರು ॥ ಭಕ್ತಿಯಿಂ ಸೇವಿಸುತಿರಲೊಳಿತಾಗುವದೆಂದು ಪೇಳಿ ಕೊಡಲಾಕೆಯು ಸಲೆ ॥ ಮುಕ್ತಿದಾಯಕಗೆ ಪೊಡಮೊಟ್ಟು ತನ್ನೂರಿಗಾ । ಸಕ್ತಿಯಿಂ ಪೋಗಿ ತನ್ನಿನಿಯನಿಗಿದೆಲ್ಲವ ಯು ॥ ಘೋಕ್ತಪೇಳಿ ಗುರುವರನನು, ನೆನೆದಾಚರಿಸಲಾರಂಭಿಸಿದಳು ತರುಣ ॥ ೪ ॥

ಹಿಮಗುವಿನ ಕಪ್ಪಾದಬಿಂಬವ ಹಿಮಗಭಸ್ತಿ । ಯಮಯೂಖಯೋಗದಿಂ ಕ್ರಮದಿ ಕಪ್ಪಳಿದು ಪೂ ॥ ರ್ಣಿಮೆಯಲಿ ಕಳಾಪೂರ್ಣವಾಗುವಂತೆ, ಮಹಿಮನ ಹಸ್ತದ ಸ್ಪರ್ಶದಿಂದ ॥ ಲಮಾಬಂದಭಸಿತದ ಸೇವೆಯಿಂ ಬೇನಿಯು ಕ । ಡಿಮೆಯಾಗುತುಳಿಯದಂತಾಗೆ ನವಚೇತನವು ॥ ಸಮನಿಸೆ ಕಮಲನಯನೆಯಮುಖ ಶಶಿಕಾಂತಿಯಿಂದ ಕಮನೀಯವೆನಿಸಿತಹೋ ॥ ೫ ॥

ಸಂತೋಷಸಾಗರದಪಾರ ನೀರಿನೊಳಗೋ । ರಂತೆ ಮುಳುಗಿದ ಕಾಂತೆಯೊಡಗೂಡಿ ಕಾಂತನುರು ॥ ಶಾಂತಮೂರ್ತಿಯ ಸನ್ನಿಧಿಯನೆಯ್ದಿ ಶಿರಬಾಗಿ ನಮಿಸಿ ದೇವದಯೆಯಿಂ ನಿ ॥ ಶ್ಚಿಂತಗುಣವಾಗಿ ಯೆನ್ನ ಸತಿಯು ವಿಶೇಷ ಸುಖ । ಶಾಂತಿಯನು ಪೊಂದಿರುವಳದರಿಂದ ಬಡವನದಿ ॥ ದಂತಿಂತೆನದಿದನಂಗೀಕರಿಸೆನುತ ಯಥೇಚ್ಛ ಧನವಿತ್ತು ಗಮಿಸಿದನು ॥ ೬ ॥

ಪಂಚಮವೆನಿಸುವ ಪಂಚಾಚಾರ್ಯರ ಸಭೆಯಂ । ಪಂಚಾನನ
ಕೃಪೆಯಿಂದುಜ್ಜಯಿನಿಯೊಳು ಕರೆದು ॥ ಚಂಚದ್ವಿಷಯಗಳನ
ದರೊಳುಚರ್ಚಿಸಿ ಚಂದ್ರಿಕೆಯೊಲು ಭುವನದೊಳಗೆ ಗುರು ॥।
ಪಂಚಾನನ ಪ್ರಭೆ ಬೆಳಗಲು ಪಾರದಪತ್ರ । ಮುಂಚೆಬೇಕೆಂದು
ಕಾಶೀನಾಥನಿಂ ಗುರುವು ॥ ಪಂಚಪಂಚಾಚಾರ್ಯ ಸುಪ್ರಭೆಯನು
ವರಮೈಸೂರೊಳು ಪ್ರಕಟಿಸಿದನು ॥ ೭ ॥

ಒಮ್ಮೆ ದಾವಣಗೇರಿಯೊಳು ವಿರತಪಕ್ಷದುರು । ಹೆಮ್ಮೆಯಿಹ
ಧೂರ್ತರು ಬಸವನಿಂದಕರ ತತಿಗೆ ॥ ಸೊಮ್ಮಿನ ಸಹಾಯವೀಯುತ
ಕಲಹವಬೆಳೆಸುವರಾದ್ದರಿಂ ಪ್ರಶ್ನದಿಂದ ॥ ಕವಿ್ಮಮಾಡುವೆವೀತನ
ಭಿಮಾನವೆಂದು ತಾ । ಪೊಮ್ಮನಸಿನಿಂ ಬಂದುಬೆಳಗಿ ನೈಘಳಿಗೆಯೊ
ಳು ॥ ಬೊಮ್ಮನಂತೆ ಮೃಗಾದನಾಸನದೊಳಿರುತಿಹ ಗುರುವನು ನಮಿ
ಸದೆ ಕುಳಿತರು ॥ ೮ ॥

ಬಾಲಸೂರ್ಯನ ಕಿರಣಗಳು ಕಿಡಕಿಯ ಮುಖದಿ । ದಾಲ
ಯವನುರೆ ಸೇರಿ ಕತ್ತಲೆಕಳೆದು ಬೆಳಗು ॥ ಪೋಲಸಮ ಮಹಿ
ಮನ ಸುಬೋಧ ವಚನಗಳು ಕಿವಿಯಿಂ ಸೇರಿಯೊಳಗಿರುವ ಕು ॥
ಶೀಲವುಂ ಕಳೆದು ಬೆಳಕಂ ಬೀರಲವರು ಚಿರ । ಕಾಲದಂಧತ್ವಪೋ
ದನೆರರಂ ॥ ತಾಲಸ್ಯವಿಲ್ಲದೆದ್ದುರೆ ದಂಡವತ್ಪ್ರಣತಿಗಳನು ಮಾಡಿ
ಕರಮುಗಿದು ॥ ೯ ॥

ಜೀಯಚಿತ್ರೈಸಯ್ಯ ಪರದುರ್ಬೋಧದಾ । ಮಾಯೆಯ
ನುಮೋಹಿಸಿಹ ಗಾಯಗೊಂಡೆವು ಗುರುವೆ ॥ ಬಾಯಿಮಾತಲ್ಲ
ಮುಂದೆ ಗುರುಸೇವೆಯೊಳಿರಿಸಿ ನಮ್ಮನುದ್ಧರಿಸೆಂದುರೆ ॥ ಬಾಯಿ
ಬಿಡುವ ಮನುಜರನು ಕೃಪೆಯಿಂ ಮನ್ನಿಸುತೆ । ಕಾಯಚಾರಿಯ
ಪೂಜಕ ಪುರುಹೂತನ ವರನಿ ॥ ಕಾಯಕೆ ಕಳಿಸಿದನಪರಾಧ ಕ್ಷಮಿ
ಸುವದಕ್ಷಯ ಶೀಲವು ಸುಜನರದು ॥ ೧೦ ॥

ಆವಭಾಷೆಯೊಳು ನಿಗಮಾಗಮಗಳು ಸಲೆ ಸಂ । ಭಾವಿಸುವ ಸರ್ವಧರ್ಮಗಳ ಕಥನದಿಂದ ॥ ಭೂವಲಯವನ್ನುದ್ಧರಿಸುತಿರುವವಾ ಸುಸಂಸ್ಕೃತ ಭಾಷೆಯೆಮ್ಮ ಜನರಿ ॥ ಗಾವಾಗಲಾಗ ಬೇಕೆಂದು ದಾರುಕಮುನಿಯ । ಪಾವನತರಾಹ್ವಯದಿ ಕೊಟ್ಟೊರುಗಚ್ಚಿನುರು ॥ ಭಾವುಕ ಮಠದೊಳು ವರಪಾಠಶಾಲೆಯನು ಸ್ಥಿರಗೊಳಿಸಿ ನಡೆಸಿದನು ಯಮಿ ॥ ೧೧ ॥

ಗಾನವು ನಿಖಿಲಶರೀರಿಗಳಿಗಾನಂದದ ನಿ । ಧಾನವು ವಿಚಾರಿಸಲು ತೊಟ್ಟಿಲೊಳಗಿಹ ಮಗುವು ॥ ಗಾನಮಂ ಕೇಳಿ ಬಿಟ್ಟಳುವದನ್ನು ಸಲೆವೋದದಲಿ ನಿದ್ರಿಪುದು ಮೃಗವ ॥ ನೂನತೋಷವತಾಳಿ ವೌನದಿಂ ನಿಲ್ಲುವದ । ಹೀನವುರಿ ತಲೆಯದೂಗುತೆ ಮೈಮರೆವುದು ಶಿವ ॥ ನೇನುಪೇಳಲಿ ಗಾನಲೋಲನೆನಿಸಿದನು ಕಿವಿಯೊಳಗೆ ಗಾಯಕರನಿರಿಸಿ ॥ ೧೨ ॥

ಮಡದಿಮಣಿಯಂತಡಿಗಡಿಗೆ ಘನಸುಖವ ಕೊಡುವ । ಕಡುಮಮತೆಯುಳ್ಳ ಮಗನೊಲು ಮನದಬೇಸರವ ॥ ನಡಗಿಸುವ ದೂತಿಯೊಲು ತನ್ನೊಳು ಮೃಡನೊಲಿಸುಯನುರಿ ಮಾಡಿಸುವದಿದೆಂದು ॥ ಸಡಗರದಿ ತಿಳಿದು ವೀಣೆಯಬಾರಿಸುವ ಕಲೆಯ । ನೊಡನರಿದು ಕಲಿತು ನಿಪುಣತೆಯನಾಂತು ಪೃಥಿವಿಯ ॥ ಮೃಡನು ಮನಬಂದ ವೇಳೆಯೊಳಗದನಂ ಬಾಜಿಸುತೆ ಪೊಂದುತಿಹ ಮೋಹವ ॥ ೧೩ ॥

ಗುರುವರೇಣ್ಯನು ಬೆಳಗುಮುಂಜಾವಿನೊಳಗೆದ್ದು । ಕರಮರಿದು ದಿವ್ಯದೃಷ್ಟಿಯಲೆಲವೊ ಸೇವಕರಿ ॥ ಕರದಿಗುದ್ದಲಿಪಿಡಿದು ಪೀಠದಗ್ನಿ ದಿಶೆಯಲಿಹ ನೆಲವನ್ನಗಿಯಿರೆಂದು ॥ ಕರದೊಯ್ಯುತೋರಲವರಗಿಯಲೆರಡುಮೊಳದಂ । ತರದೊಳು ಗುಡಿಯದರೊಳು ದಿವ್ಯಶಿವಲಿಂಗವಂ ॥ ನೆರೆದಪುರದವರು ನೋಡಿ ಚರಣಕೆ ಮೈಯ್ಯನೀಡಾಡಿ ನುತಿಸಿದರು ಮುನಿಯ ॥ ೧೪ ॥

ಸಾದರದಿ ಸೌವರ್ಣದಡ್ಡಪಲ್ಲಕ್ಕಿಯೊಳು । ಭೇದಿಸುತ್ತಲಿರೆ ದಿಗ್ವಲಯವನು ವಾದ್ಯಗಳು ॥ ವೇದಘೋಷವಭಿಮಾನಿಗಳ ಹೃ ದಯದೊಳು ಮೋದವನು ನೆರೆಹೆಚ್ಚಿಸುತಿರೆ ||| ವೇದ್ಯರಹ ಬಳ್ಳಾರಿ ಪುರದ ಪ್ರಮುಖರು ಪ್ರ । ಸಿದ್ಧ ಸಕಲಬಿರುದಾವಳಿಗಳಿಂ ತವಸಿ ಯಹ ||| ಸಿದ್ಧಲಿಂಗನನುರೆ ಮೆರೆಸಿ ಕಾಣಿಕೆಯನಿತ್ತು ಕೃತಕೃತ್ಯ ರಾದರು ಗಡ ||| ೧೫ |||

ವೃದ್ಧರಹ ಮರುಲಸಿದ್ಧಗುರುಗಳು ವೈರವನು । ಬುದ್ಧಿಪೂ ರ್ವಕ ತನ್ನೊಡನೆ ಮಾಡುತಿರಲು ತಾ ॥ ನುದ್ಧತತನದೊಳವರೊ ಳಾಚರಿಸುವದದಪ್ರಬುದ್ಧತನವೆಂದುರೆ ತಿಳಿ ||| ದಿದ್ದೆಡೆಗೆ ಪೋ ಗಲವರೆದ್ದು ಶಿರಬಾಗಿಸಿದ । ಸಿದ್ಧಲಿಂಗನನು ಬಿಗಿಯಪ್ಪಿ ಮುದ್ದಿ ಟ್ಟರ್ಧ ॥ ಗದ್ದುಗೆಯೊಳಗೆ ಕೂಡ್ರಿಸಿದರು ಬಾಗಿದವರೊಳು ಬಡಿ ವಾರ ಹೆಡ್ಡತನದು ||| ೧೬ |||

ಎರಡು ಸಂವತ್ಸರಗಳಾಗಲತಿ ವೃದ್ಧರಹ । ಮರುಳಸಿದ್ಧ ರು ಸುಪ್ರಮೋದದೂತಾಖ್ಯವ || ತ್ಸರದಿ ಕೊಟ್ಟೂರದಿ ಜಡಶರೀ ರವನು ತೊರೆದು ಪರಮಶಿವನೊಳು ಬೆರೆಯೆ ಕೇ ||| ಳಿರದಲ್ಲೈತಂದು ಚಿತಪಾರಲೌಕಿಕ ಕರ್ಮ । ಭರದಿ ಸಾಂಗೋಪಾಂಗವಾಗಿ ಗೈಸಿ ಜಗ ದೊಳು || ಸುರುಚಿರಯಶೋರಾಶಿಯಿಂ ವಿರಾಜಿಸಿದನು ಜಗದ್ಗುರು ವರೇಣ್ಯನಾಗ ||| ೧೭ |||

ಖೂಳರಕ್ಕಸನಂತೆ ಕೊಬ್ಬುಬ್ಬಿರುತಿಹ ಬಲು । ಕೀಳಗೌಡ ನುಬಂದು ಪುರದಿ ಮೆರೆಯಲಿಹ ಭೂ ॥ ಭಾಳಲೋಚನನುತ್ಸವವ ತಡೆಯಲಾಗ ಬಣವಿಗೆ ಬೆಂಕಿಪತ್ತಿದುದನು ||| ಕೇಳಿಯದನಾರಿಸ ಲು ಜನರನಲ್ಲಿಗೆ ಕಳುಹಿ । ತಾಳಿಸದ್ಭಕ್ತಿಯನು, ಚರಣಯುಗಲ ಕೆರಗಿ ಕೃ || ಪಾಳುವಿನ ಪಲ್ಲಕ್ಕಿಯನು ಪೊತ್ತು ಮೆರೆಸಿದನು ಬಿಸಿ ಗರಗು ಕರಗುವದಲ ||| ೧೮ |||

ಚೌಡೇಶ್ವರೀದೇವಿಯಾಲಯವು ಮಡ್ರಳ್ಳಿ । ಕಾಡಿನೋಳಿ ರುವದೆಂಬುದನು ತಿಳಿವದನಸ್ನು ॥ ನೋಡಬೇಕೆಂಬುತ್ಕಟ ಕುತೂ ಹಲದಿನಾರಿಗುಂ ಪೇಳದೋರ್ವನೆ ಗುರು ॥। ಬಾಢಭಾವದಲಲ್ಲಿಗೊ ಡನೈದಿ ತವಕದಿಂ । ನೋಡಿ ಬಾಗಿಲು ಬೀಗಮುದ್ರೆಯಿಂದಿರುವ ದನು ॥ ಮಾಡೆ ಸ್ತುತಿಯನು ದೇವಿಕದವಂ ತೆರೆದು ದರ್ಶನವನಿತ್ತ ಳು ತವಸಿಗೆ ॥। ೧೯ ॥।

ನಾಗಪಾವನಿಗೆ ಕಡಿವಡವಗೀ ಬೇರುತೇ । ದಾಗ ತೊಲಿಯ ಷ್ಪು ರಸವನು ಹೊಟ್ಟೆಯೊಳು ಕೊಟ್ಟು ॥ ಬೇಗನುಳಿದುದನು ಕಡಿ ದಂಗಕ್ಕೆ ಲೇಪಿಸುತ್ತಿರೆ ವಿಷನಿಳಿದು ಗುಣವಹು ॥। ದೀಗಿದನುತೆಗಿ ಕೋಯೆಂದು ಶಿವಯೋಗಿಯನು । ರಾಗದಿಂ ಪೇಳಲು ಪಿಟೀಲಿ ಚನ್ನಬಸವನು ॥ ಬಾಗಿ ಪ್ರಸಾದನೆಂದದನುತಕ್ಕೊಂಡುಪೋದನು ರಾಯಚೂರಿಗೆ ಗಡ ॥। ೨೦ ॥।

ರಾಯಚೂರೊಳುನಾಟಕಮನೆಯೊಳು ಸುಖದಿಂದ । ಸಾಯಂ ಸಮಯದೈದುಗಳಿಗೆ ರಾತ್ರಿಯೊಳು ವಾ ॥ ಕ್ಯಾಯದಭಿನಯಪೇಳ್ತ ಸಂಗೀತ ವಿಬುಧ ಚನ್ನಬಸವನಿಗೆ ವರಸರ್ಪ ॥। ವಾಯವಾದಂಗ ವಂ ಕಡೆದುದಂ ಕಂಡದರ । ಕಾಯವಂ ಹುಡಗರು ಕಡಿದೊಗೆಯ ಲು ಜನರದರು ॥ ಪ್ರಾಯಗಳನುರೆ ಶೋಧಿಸುತಿರೆ ವಿಷದವಿಕಾರವೇ ರುತಿರಲಿಯ್ಯನವರು ॥। ೨೧ ॥।

ಗುರುಸಾರ್ವಭೌಮನಿತ್ತಾಬೇರು ನೆನಪಾಗೆ । ಕರೆದಿದ್ದಬಾ ಗಪೇಳಲವಪೋಗಿಯದು ತಂ ॥ ದಿರದತೇದದರ ರಸವನು ಕುಡಿಸಿ ಮೈಗೆ ಲೇಪಿಸಲಲ್ಪಕಾಲದೊಳು ಮೈ ॥। ಮುರಿದೆದ್ದು ಮನದೊ ಳಿಚ್ಚರವನಾಂತು ಸಮೀಪ । ದಿರುವಜನರಂ ಕುರಿತು ನಾನಿಲ್ಲಿಗೂ ರಿಂದ ॥ ಲಿರದೆಬರುವಾಗ ಮುಂದೊದಗುವದನು ತಿಳಿದುಸುರಿದನು ಗುರುವೆಂದೆನಿಪುದು ॥। ೨೨ ॥।

ಲೋಕ ಸಾಮಾನ್ಯಧರ್ಮದವನಲ್ಲ ಗುರು ತ್ರಿ । ಲೋಕಮಾ
ನ್ಯ ಚರಿತನು ಜಗದೊಳಂತೇವಾಸಿ ॥ ಲೋಕವನಿಜೌರಸಾಪತ್ಯ
ದಂತೆ ನಿರೀಕ್ಷಿಸುವ ಕೃಪಾಕೂಪಾರನು ॥। ಸಾಕಾರಮೂರ್ತಿಯಹ
ಪರಬೊಮ್ಮದ ದುರಿತಾ । ನೇಕಪದ ಕುಂಭಸಂಭೇದ ಪಂಚಾನನ
ನು ॥ ಭೂಕಪಾಲಿಯಿರುವದರಿಂದಾತನಂ ಪೂಜಿಸಿ ಪುನೀತರಾಗುವ
ರಲ ॥। ೨೩ ॥।

ಕಾಲುವೆಯ ಜಲವು ಬನದೊಳಗಿರುವ ಪಾದಪಗ । ಳಾಲವಾ
ಲಕೆ ಮುಟ್ಟುವ ತೆರದೊಳುರು ಪ್ರಭಾ ॥ ಶಾಲಿಯ ಸುವಾರ್ತೆಯ
ದು ರಾಯಚೂರೊಳಗೊಬ್ಬರಿಂದಲೊಬ್ಬರಿಗೆ ತಿಳಿದು ॥। ಗಾಳಿಯಿಂ
ಗಂಧದಂತೆ ಹರಡಲಾಮುದವಾಂತು । ಪೂರ್ಲಲಾಮಾದಿ ಸಕಲಜನ
ರುರೆತಲೆದೂಗಿ ॥ ಶೂಲಿಯಪರಾವತಾರಿಯಹನೆಂದೆನುತ ಕೊಂಡಾಡಿ
ದರು ಗುರುವರನನು ॥। ೨೪ ॥।

ಅಂತನಂತಪುರದ ಪ್ರಾಂತಸಾಲ್ಗುತ್ತರೊಳಗೆ । ಕಂತುಹರಭ
ಕ್ತರೈದೆರಗಿ ನಮ್ಮಯಪೇಕ್ಷೆ ॥ ಗಿಂತಮುಪ್ಪಟ್ಟು ಜನ ಹೆಚ್ಚಿರು
ವದೆಂತು ಗೆಯ್ಯುವದೆಂದುಸುರಲವರಿಗೆ ॥। ಚಿಂತೆಯನು ಬಿಡಿರಿ
ಮಾಲದಿಯ ಕಟ್ಟೆಯಮೇಲೆ । ಸಂತಸದಿ ಗುರುಮೂರ್ತಿಯನು
ಕೂಡಿಸಿ ಭಜಿಸಿ ಸು ॥ ಶಾಂತಮನದಿಂ ನೀಡಿರೆಂದುಸುರಿ ತಾನಲ್ಲಿಗೈ
ದದರ ಪರಿಮಾಡಿಸಿ ॥। ೨೫ ॥।

ತನ್ನ ಹಸ್ತಗಳಿಂದ ಪುಟ್ಟಿಯಂ ನೆರೆತುಂಬಿ । ದನ್ನ ನೀಡಿ
ರೆನುತಪ್ಪಣೆಯನಿತ್ತೈದಿ ಪ್ರ ॥ ಸನ್ನಮುಖನಾಗಿ ಲಿಂಗಪ್ರಸಾ
ದವನು ಭೋಗಿಸಿದನು ಗುರುವರನಿತ್ತ ॥। ಖಿನ್ನರಾಗದೆ ಸಂಚಿ
ವರಿಗುಣಬಡಿಸಿದರದು । ಮುನ್ನಿನಂತಿದ್ದುದಂ ಕಂಡು ಮುದದಿಂ
ಪಂಕ್ತಿ ॥ ಯನ್ನು ಪೂರೈಸಿ ಬಂದಡಿದಾವರೆಗಳ ಯುಗವನಭಿ
ವಂದಿಸಿ ಭಕ್ತರು ॥। ೨೬ ॥।

ದೇವನಿನ್ನಯ ಮಹಿಮೆಯಂ ಮಹೀತಲದೊಳಗ । ದಾವ ಬಣ್ಣಿಸಬಲ್ಲ ಶೇಷಗಳವಲ್ಲೆನಲು ॥ ಭಾವುಕ ಶ್ರೀ ಬಸವನಲ್ಲಿದ್ದಪರಿ ನಿನ್ನೊಳೂ ಪಂಚಪರುಷಗಳಿವೆ ॥। ನಾವುಹೀಗೂಹಿಸಲು ಬರುವ ದೇಕೆನೆ ಮೊನ್ನೆ । ಶೈವನಸುವಳಿದ ಶಿಶುವಿನುಸುರು ತರಿಸಿದೆನೀ॥ ಕೇವಲಾಲೋಕದಿಂದೀಗ ಕರದಿಂ ಪ್ರಸಾದವನು ಬೆಳೆಸಿರುವೆಂದರು ॥। ೨೭ ॥।

ಪದುಳದಿಂ ಶ್ರಾವಣದ ಮಾಸದೊಳು ಸದನದೊಳು । ಪದಿನಾಲ್ಕು ಪಟ್ಟಾಧಿಕಾರಿಗಳ ಪೂಜೆಯನು ॥ ಪದಿನಾಲ್ಕು ಮಂಟಪಗಳಲಿ ಬೇರೆ ಬೇರೆ ಮಾಡುವ ನಿಯಮವಂ ನಿಶ್ಚಿಸಿ ॥। ಯದರಂತೆ ಶಿರಿವಂತ ನಾಗನಾಥ ಕಥಲೆಯು । ಬುಧರಾದಪಟ್ಟಾಧಿಪರ ಪೂಜೆಯನ್ನು ಪ್ರ ॥ ತಿದಿನ ಬಂದತಿಥಿಗಳಿಗನ್ನಸಂತರ್ಪಣೆಯನು ಸುಖದಿಂ ಮಾಡುತಿಹನು ॥। ೨೮ ॥।

ಪಾರಣವಪಾರ ಮಹಿಮಾಧಾರ ಭುವನ ದಾ । ಚಾರ್ಯನಹ ಸಿದ್ಧಲಿಂಗಶಿವಯೋಗಿಯ ಪಾದ ॥ ಸಾರಸಗಳ ನಿಕಟದಿ ಪೂರೈಸುವದಧಿಕ ಸುಖಕರವೆಂದು ತಿಳಿದು ನಿಜ ॥। ಕಾರಭಾರಿಯನು ಕಳುಹೆ ಬರಲವರನು ಬಾರ್ಶಿ । ಪೂರೊಳಡ್ಡಂದಣದೊಳಗೆ ವೇದಮಂತ್ರಂಗ ॥ ಳಾರವವನಂತರ್ಗೊಳಿಸಿ ವಾದ್ಯಗಳು ಭೋರ್ಗರೆಯುತಿರೆ ಮೆರೆಸಿದನವನು ॥। ೨೯ ॥।

ನಿತ್ಯದೊಳು ಸನ್ನಿಧಿಗೆ ಭಕ್ತಿಯಿಂ ಬರುವ ಭ । ಕ್ತೋತ್ತಮರಿಗೆ ಭವಬೀಜವಳಿದು ಬಕುತಿ ಬಳ್ಳಿ ॥ ಯತ್ಯುತ್ತಮ ಫಲದುಸುಭೋಗಸಾಧನ ವಚನನಿಚಯಗಳನುಪದೇಶಿಸಿ ॥। ಬಿತ್ತರಿಪ ಸುಖಸಾಗರದೊಳಗವರನು ಮತ್ತೆ । ಮತ್ತೆ ಮುಳುಗಿಸುತಲೊತ್ತರಿಸುವ ನಿಜಾನಂದ ॥ ದೊತ್ತಿನಲಿಶಿವಯೋಗವಿದ್ವರ ತಪೋಂಕನಾಡುತಿರಲೊಂದುದಿವಸದೊಳು ॥। ೩೦ ॥।

ಚಂಡವಹನುಧ್ಯಾನ್ಹ ನಾಲ್ಕುಘಂಟೆ ಸಮಯದೊ । ಳೊಂದು
ಮುಂಗಲಿಯು ಮತ್ತೊಂದು ನಾಗೆರಡು ಸಿ ॥ ಟ್ಟಿಂದ ಕಥಲೆಯವರ
ಮನೆಯ ಹಿಂದಿರುತಿಹಪೂಲಿನಕೆಳಗೆ ಬಹಳರಭಸ ||| ದಿಂದ ಕಾದಾ
ಡುತಿದ್ದವೆರಡಾಕಾರವನು । ಪೊಂದಿರುವ ವೀರರಸವೇನೆನೆ ಬಲಕ್ಕ
ರದ ॥ ಲಂದು ಶಿಕ್ಕಿರಿದು ನೋಡುತಲಿದ್ದಿತವುಗಳ ಕಲಹವನ್ನು ಜ
ನವೃಂದವು ||| ೩೧ |||

ಸಿಟ್ಟಿನಿಂ ಭುಸ್ಸೆಂದು ಸರ್ಪವು ಪೆಡೆಯನೆತ್ತಿ । ಕಟ್ಟನೆ ಕಡಿ
ಯುವದನು ತಪ್ಪಿಸುತ ಮುಂಗುಸಿಯು ॥ ದಿಟ್ಟತನದಿಂ ಪಂಜದಿಂ
ಪೊಡೆಯಪೋಗಲದನನು ನೆರೆತಪ್ಪಿಸಿತಲ ||| ಒಟ್ಟಿನಲವೆರಡು
ದಂಷ್ಟ್ರಗಳು ಕದನ ಕಲಿತಿಹ । ಜಟ್ಟಿಗಳೊಲುರು ಜಾಣತನದಿಂದ
ಹೋರಾಡಿ ॥ ಕಟ್ಟಕಡಿಗವು ತಮ್ಮ ಜೀವದಾಶೆಯನು ಬಿಟ್ಟು ಬಡಿ
ದಾಡುತಲಿದ್ದವು ||| ೩೨ |||

ನೋಡುತಿಹಜನರವುಗಳ ಕಲಹವ ಮಾಣಿಸಲು । ಮಾಡುವ
ವುಪಾಯಗಳುಕಾದೆಂಣಿಭಾಂಡದೊಳ ॥ ಗಾಡಲೇಂ ನೀರೆರಚಿದಂತಾ
ಗಿ ಕಾಯ್ದೇರಿ ಕಡಿದಾಟ ಹೆಚ್ಚಾಯಿತು ||| ನಾಡೆತಾಪಸರೊಡೆಯ
ನಾಗ ಸುರಚಿರಡಮಣಿ । ಗಾಡಿಯೊಳು ಸಿರಿವಂತರ ಮನೆಯಿಂ
ಬರುಬರುತ ॥ ನೋಡಿ ಕೂಡಿದಜನಗಳನಿದೇನೆನುತ ಕೇಳಲವರು
ಸುರಿದರು ನಯದಲಿ ||| ೩೩ |||

ಕೇಳಿ ಮನದಿ ಕನಿಕರತಾಳಿಳಿದು ಡಮಣಿಯಿಂ । ದಾಳಿನ ಕರ
ಪಿಡಿದೈತಂದು ನೋಡಿ ಕರದಿಂ ॥ ತಾಳಿರೆಲೊ ದೇಹಗಳಲೋರ್ವ
ತೃಸಿರುವನದರಿಂದಲರಿತನವೇತಕೆ ॥ ಕಾಳಗವ ಕಳೆದು ಮೈತ್ರಿ
ಯೊಳು ಬಾಳುವದು ಚೀ । ನಾಳಿಗಳ ಧರ್ಮವದು ಕೀಳತನಬಿಡಿ
ರೆಂದು ॥ ಹೇಳುವ ಮಹಿಮನ ವಾಗ್ಮಹಿಮೆಯೊರಡರಲುರಿವ ವೈ
ರಾಗ್ನಿಯುಸಣಗಿಸಿತು ||| ೩೪ ॥

ಲೀಲಿಹಾನನ ಕುಲಗಳೆರಡು ಶಾಂತಮನದಿಂ । ದಾಲಿಸಿ ಚಣ ಯವೆಯಿಕ್ಕದೆ ನೋಡಿ ಸುದಯಾಲ ॥ ವಾಲನರ್ಿ ಮರೆದಾತ್ಮನ್ನೈ ರವಂ ಕೂಡಿ ನಡೆದವು ನಿಜಬಿಲಗಳ ಕಡೆಗೆ ॥। ಮೇಲೆನಿಪ ಸುಗು ಣಸಂಪನ್ನನಹ ಯಮಿಯು ಭೂ । ನೀಲಲೋಹಿತನನೇಕ ಮಹಿ ಮೆಗಳುಗಮನು ಸು ॥ ಶೀಲ ಸುಂದರನೆಂದು ಹೊಗಳಿದರು ನೆರೆದ ಜನರು ಗುರುಕುಲ ತಿಲಕನನ್ನು ॥। ೩೫ ॥।

ಮರೆದೊಮ್ಮೆಯಾದರನುಚಿತ ಪಥದಿ ಪದನಿಕ್ಕ । ದರಿಗಳಾ ರರ ಮದವ ಮುರಿದ ಚಿರರುಚಿವದ ॥ ಸ್ಥಿರ ವಿಷಯಗಳನು ಕನಸಿ ನಲಿ ಕೂಡ ನೆನೆಸದಿರುವ ದಯಾದಾಕ್ಷಿಣ್ಯಗ ॥। ಳುರು ನೆಲೆಯಹ ನಿ ಗಮಾಗಮವೇತ್ತೃ ವಿಬುಧ ತತಿ । ವರಜನಾಂಬಕಗಳೆಂಬ ಮರಿ ದುಂಬಿಗಳ ಸುಖ ॥ ಕರ ಮುಖಕಮಲ ಮನೋಹರ ಹೊಟ್ಟಗೆಯ ಪಟ್ಟಪತಿ ಚನ್ನವೀರೇಶನು ॥। ೩೬ ॥।

ಸಿದ್ಧ ವರಸಿಂಹಾಸನಾಧ್ಯಕ್ಷ ಗುರುದೇವ । ಸಿದ್ಧಲಿಂಗಜಗ ದಾಚಾರ್ಯನಲ್ಲಿಗೆ ಬಂದು ॥ ಶುದ್ಧಭಾವದಲವರ ಚರಣ ಕಮ ಲಕಭಿವಂದಿಸಿ ಬದ್ಧಹಸ್ತನಾಗಿ ॥। ಬುದ್ಧಿಲ್ಲಿಗೆ ಸಮೀಪದಲಿರು ವಂತೇಡಸೆನಿ । ಪುದ್ಮಾಮ ಸಿದ್ಧಿದಾಯಕ ಭೂದರದ ಮಧ್ಯ ॥ ದ್ದಿದ್ದು ತಪವನೆಸಗಲೆನಗನುಗ್ರಹವ ಮಾಡಬೇಕೆಂದರಿಕೆ ಗೆಯ್ದ ನು ॥। ೩೭ ॥।

ಎಲೆಮಗುವೆ ನೀನೆಳೆಯಬಾಲಕನು ತಪವದು ಸು । ಲಲಿತವ ಲ್ಲಾದರೂ ಧೃವನಂತೆ ಸಿದ್ಧಿಯಂ ॥ ಸುಲಭವಾಗಿ ಪಡೆಯೆಂದು ಶಿರದಿ ವರದ ಕರವನಿರಿಸಿ ಹರಸಿಗುರುವರನು ॥। ಕಳಹಲತಿಹರ್ಷ ದಿಂ ರೋಮ ಹರ್ಷಣನಾಗಿ । ಗಳಿಲನೆ ಗಿರಿಗೆ ಬಂದು ಸೇವಕರು ನೆರೆ ಸಿದ್ಧ ॥ ಗೊಳಿಸಿದುಟಜದೊಳು ತಪವನ್ನಾಚರಿಸಲಿಕಾರಂಭಿ ಸಿದನೆಳೆ ತವಸಿಯು ॥। ೩೮ ॥।

|| ನಮಃಪಂಚ ಜಗದ್ಗುರುಭ್ಯಃ ||




ಶ್ರೀ ಬಾಲತಪಸ್ವಿ
ಹುಟಗಿ ಶ್ರೀಗಳು.

ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ
ಮಹಾಸ್ವಾಮಿಗಳು.

ಮೂರನೆಯದಿನದುಷಃಕಾಲದೊಳಗೆದ್ದು ಹೃದಿ । ಮೂರಹರನಂ ನೆನೆದು ಮಜ್ಜನಕ್ಕಾಗಿ ಹೊರ ॥ ಸಾರುವಾಗ ದ್ವಾರಕಡ್ಡಬಿದ್ದಿಹನುಹೋರಗವನ್ನು ಕಾಣಲವ ಹಾ ॥। ಹಾರಿ ತಿರಿಗೈದಿಹ "ಶಿವಃಶರಣ" ನೆಂದೊರಗೆ । ಸೂರಿಯಾಸಿದ್ಧಲಿಂಗನು ಕನಸಿನೊಳು ಬಂದು ॥ ಸಾರಸಾಕ್ಷನೆ ಬೆದರಬೇಡ ನಿನ್ನಯ ರಕ್ಷಣೆಕೆ ಕಳಿಸಿರುವೆನುರಗವ ॥। ೩೯ ॥।

ಅತ್ತಿತ್ತಲೆಚ್ಚೆತ್ತು ನೋಡೆ ಗುರುಕಾಣದಿರ । ಲೆತ್ತಪೋದನಿದು ಕನಸೊ ಮತಿವಿಭ್ರಮವೊಯೆಂ ॥ ಧುತ್ತುಮನಹತವಸಿಯು ಚಣಹೊತ್ತು ಮುಗ್ಧನಿದ್ದೆದ್ದು ಹೊರಗೀಕ್ಷಿಸಿ ನೋಡೆ ॥। ಮತ್ತೆ ಚಕ್ಷುಃಶ್ರವವು ದೃಗ್ವಿಷಯವಾಗದಿರ । ಲತ್ತಪೋಗಿ ಜಳಕಂ ಬೊಕ್ಕುಮಡಿಯುಟ್ಟು ಬಂ ॥ ದುತ್ತರಾಭಿಮುಖನಾಗಾಸನದಿ ಕುಳಿತಾಚರಿಸಿದನಾತನು ತಪವನು ॥। ೪೦ ॥।

ಮುಂಜಾವಿನ ಶಿವಪೂಜೆಯನು ಪೂರೈಸಿ ಹೊರ । ರಂಜಿಪಜಿನಾಸನದಿ ಬಾಲಸೂರ್ಯನೊಲು ಸಲೆ ॥ ಮಂಜುಲತರನೆನಿಸಿ ವಿರಾಜಿಸುವ ಹೊಟಿಗಿ ಬಾಲತಪೋಧನವರನ ಪದ ॥। ಕಂಜಗಳಿಗಭಿನಮಿಸಿ ಕಥಲೆವಂಶಾಂಬುಧಿಗೆ । ಮಂಜುಗದಿರನೆನಿಪ ಶ್ರೀಮಂತನು ಮನದೊಳು ॥ ಸಂಜನಿತ ಹರ್ಷನಾಗಿಗುರುಪೇಳಿದುದನೊಂದಕ್ಕರ ಬಿಡದುಸುರಿದನು ॥। ೪೧ ॥।

ಏನಿದಚ್ಚರಿಯೆನ್ನಕನಸಿನೊಳು ಪೇಳಿದಂ । ತೀನರೋತ್ತಮನ-ಮುಖದಿಂದ ಪೇಳಿದನಮಮ ॥ ಮಾನವನರೂಪದಿಂದಿರುವಮೃತಭಾನುಶೇಖರನಲ್ಲದಿತರನುಂಟೆ ॥। ಮಾನಧನ ಗುರುವರೇಣ್ಯನೆನುತಡಿಗಡಿಗೆ ಸಂ । ವ್ಯಾನಿಸುತೆ ತದ್ವಾಕ್ಯಮಂ, ಮನದೊಳಗನು ಸಂ ॥ ಧಾನಿಸುತೆ ತದ್ರೂಪಮಂ, ನೋದಮೇದುರನೆನಿಸಿದನು ತಪೋಧನನನಹೊ ॥। ೪೨ ॥।

ಶಿರಿವಂತರರಸ ಕೇಳೀನೇನರಿಯದಿರುವ । ತರುಳನ ಪೊರೆಯುವ ಭಾರವದೀಗಿನಂತೆ ಮುಂ ॥ ದಿರಲುಬೇಕೆಂದರಿಕೆಮಾಡಿಕೊಳ್ಳುವೆನೆಂದು ನನ್ನವತಿಯಿಂದ ನೀನು ॥। ಗುರುಚರಣದೊಳು ಬಿನ್ನವಿಸಬೇಕೆನುತ ಪೇಳಿ । ಹರಿಸದಿಂ ಧನಿಕನಂ ಕಳುಹಿ ಸಾಯಂಸ್ನಾನ ॥ ಕರಣಮಂ ಪೂರೈಸುವದಕೆ ಪೋದನುಜಲಾಶಯವಿದ್ದೆಡೆಗೆ ಭರದಲಿ ॥। ೪೩ ॥।

ಒಂದರಿಂಪೆಚ್ಚಾದ ನಾಲ್ವತ್ತುದಿನಕೆ ಸಲೆ । ಸಂದತಪವಿಂದು ಶೇಖರನ ಸುಕೃಪಾಶಕ್ತಿ ॥ ಯಿಂದ ಪೂರೈಸಿ ಬಾರ್ಶಿಗೆ ಬಂದು ಮಿಂದು ಮಡಿಯುಟ್ಟು ಭಸಿತಿಟ್ಟೆಳಿಕದಿ ॥। ಬಂಧುರಾನುನಯದಿಂ ಚರಚರಣಯುಗಲಾರ । ವಿಂದವಾರಿಯನು ಸೇವಿಸಿಕುಳಿತ ಬಾಲವೌ ॥ ನೀಂದ್ರನೀವ ಪ್ರಸಾದವನೊಲ್ಲೆನೆಂಬ ಭಾವವನರಿದುದುಗುರುವಾಗ ॥। ೪೪ ॥।

ಬಾಲತಾಪಸನೆ ನಿಯಮುವ ನಾವೆಡೆಯೊಳು ಪರಿ । ಪಾಲಿಸುವನೊ ತದಂಗಭೂತ ಪಾರಣವನು ಸು ॥ ಶೀಲನಲ್ಲಿಯೆ ಗೆಯ್ಯಬೇಕೆಂದು ನಿಯಮದ ಕ್ರಮವಂ ಕರಂ ತಿಳಿಸಿ ವಿ ॥। ಶಾಲಮತಿ ಮುನಿಮಾನ್ಯ ಚರನು ಪ್ರಸಾದವನು । ಲೀಲೆಯಿಂದಿತ್ತು ಬಯಕೆಯನು ಸಫಲಗೊಳಿಸಲು ॥ ನೀಲಗಲನಂತಿರುವ ಗುರುಕೃಪಾಲುವಿಗೆರಗಿ ಪೋದನೂರಿಗೆ ತವಸಿಯು ॥। ೪೫ ॥।

ಸಾರಸಂಧರಪುರದಿ ಸಿದ್ಧಲಿಂಗ ತವಸಿಯು ॥ ಸೂರಿಗಂಗಾಧರ ಸುಚನ್ನವೀರ ಪರಮಾ ॥ ಚಾರ್ಯರಿಂ ಕೂಡಿ ಪಂಚಶಿವಲಿಂಗಗಳ ದರ್ಶನಕೆ ಪೋಗುವ ಪಥದೊಳು ॥। ಕಾರಿನಿಂದಿಳಿದು ತುಂಬಿಯ ಪೂವನೆತ್ತುತಿರೆ । ಸಾರಿಸನ್ನಿಧಿಯನ್ನು ಹತ್ತಿರಿಕೆಪಲ್ಯವನು ॥ ತೋರಿ ಬುದ್ಧೀಪೂಜೆಗಿದುಬರುವದೇನೆಂದರಿಕೆಯ ಮಾಡಿದನಾದ್ಯನು ॥। ೪೬ ॥।

॥ ಶ್ರೀ ಜಗದ್ಗುರು ರೇಣುಕಾಯ ನಮಃ ॥



ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ
ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ
ವೀರಗಂಗಾಧರ ರಾಜೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳು.

ಆಧಾರವಿರುವದೇನಿದಕಿದ್ದರೆ ಯದನ । ನ್ನೋದಿತೋರಿಸೆ ನುತಿರೆ " ಶಂಖಿನೀ ಗಿರಿಚೂತ " ॥ ವೆಂದು ಮಂತ್ರವಿಹುದೆಂದ ರಿಕೆ ಮಾಡಿಕೊಳಲಾಗ ಗುರುರಾಜನು ಸಂಧೃತ ॥। ಮೋದನಾಗಿ ಪ್ರಸನ್ನ ಸುರೇಣುಕನು ಕರಂ । ಮೇದಿನಿಯೊಳಾರಮುಖದಿಂ ಬೋ ಧಿಪನೆನುವದು ॥ ಸಾಧಾರಣ ನರನರಿಯನೆನುತುರೆ ಗಂಗಾಧರನನು ಮನ್ನಿಸಿದನು ಗಡ ॥। ೪೭ ॥।

ಬಳಿಕಲ್ಪದಿನದೊಳಗೆ ಗುರುತಿಲಕ ನುಡಿದಂತೆ । ತಿಳಿವಿಗೆ ತವ ರೆನಿಸಿದ ಗಂಗಾಧರ ವಿಬುಧನು ॥ ತಿಳಿಯೆ ಪ್ರಸನ್ನ ರೇಣುಕನೆಂಬ ಭಿಧೆಯನಾಂತು ವರರಂಭಾಪುರಿಯೊಳು ॥। ಹೊಳೆಯುತಿಹ ಮಣಿ ಖಚಿತ ವೀರಸಿಂಹಾಸನದಿ । ಕಳೆವೆತ್ತು ಬೆಳಗುತಿಹನು ದಿಗಂತ ವಿ ಶ್ರಾಂತಿ ॥ ಮೀಱತಿಹ ಯಶೋರಾಶಿಯಿಂ ಚಂದ್ರನಂತೆ ಚಂದ್ರಿಕೆ ಯಿಂ ಕುವಲಯವನ್ನು ॥। ೪೮ ॥।

ಒಂದೆರಡುಸಾರಿ ಕರೆಕಳಿಸಿದರು ಬಾರದಿಹ । ಮಂದಮತಿ ನಂದೂರು ಜನದಮೇಲೆ ಸಲೆಕೋ ॥ ಪಾಂಥನಾಗಿ ಪರಿವಾರವ ಬಿಟ್ಟು ದಾಸನಿಂದೆರಡನೆಯವನೆನಿಸುತಲಿ ॥। ಮಂದಗತಿಯಿಂಪೋ ಗುತಿರಲಾಗ ಮುಸಲಧಾ । ರೆಂದದಿ ಮಳೆಯುಬರ ಶಳಿಯಲೆತ್ತುಗ ಳು ಪಥದಿ ॥ ಮುಂದಡಿಯಿಡದಪರಿ ಬಲಂ ಗುಂದೆ ತಾಪಸನಡವಿ ಯೊಳಾರಾತ್ರಿ ಕಳೆದ ॥। ೪೯ ॥।

ಬೆಳಗಾಗಲೆದ್ದುನೋಡಲೆಡದಾರಿಯೊಳಗುರೆ । ಪೊಳೆವರೇ ವಣಸಿದ್ಧನ ಗುಡಿಗೋಗುತೆ ತುಂಬಿ ॥ ಮೊಳಕಾಲದೆತ್ತರದಿ ಬೀ ಳುತಿಹ ಹೊಲದೊಡ್ಡಿನಜಲದಿ ಜಳಕವ ಮಾಡಿ ॥। ಗಳಿಲನೆಯ ದೇ ನೀರಿನಿಂ ರುದ್ರಮಂತ್ರಂಗ । ಳೊಳಭಿಷೇಕವಗೆಯ್ದು ಮೃ ತ್ತಿಕೆ ಭಸಿತೆನಿಸಲ ॥ ಮಳಲಿಂಗಪೂಜೆಯನು ನೆರವೇರಿಸಿಮುದವ ಡೆದನು ಗುರುವರೇಣ್ಯನು ಕಣ ॥। ೫೦ ॥।

ಕರಸಿದರು ಬಾರದಿಹ ನಂದೂರಿನವರು ತಾ । ವಿರದೆ ಬಂದು ಪ್ರಣಾಮವನು ಗೆಯ್ದು ಕ್ಷಮೆಯ ॥ ಸುರೆಬೇಡಿ ದಯೆಯಿಂದ ಲೂರಿಗೀಗ ದಯಮಾಡಿಸಬೇಕು ತಾವೆನ್ನುತ ॥। ಚರಣಸನ್ನಿಧಿಯೊಳರಿಕೆಯ ಮಾಡಲಾಗ ಗುರು । ವರನು ಬಿಡಿರೊ ಬಡಬಡಿಸುವದನ್ನು ಮೊದಲು ಮಾ ॥ ಡಿರಿ ಯುಂಣುವಡನೇಳಿರೆಂದು ಕಳಿಸಿದನವರನು ಜಳಕಕ್ಕೆ ಜಲದೆಡೆಗೆ ॥। ೫೧ ॥।

ಊರೊಳಗೆ ಬೇಡಿತಂದಿದ್ದರಡು ಬಕ್ಕರಿ ವಿ । ಚಾರಿಸಲು ಶಾರೆಸೇಂಗಿವುಗಳಿಂದಲರವ ॥ ತ್ತಾರು ಜನರಿಗುಣಬಡಿಸುವದು ಹೇಗೆಂದು ಚಿಂತಿಸುವ ಸೇವಕನ ನೋಡಿ ॥। ಬೇರೆಯೋಚಿಸಬೇಡ ಬರಿದೆ ನೆರೆಯುವೆರಡರ । ಚೂರುಗಳನೆಣಕೆಯಿಂ ನೀಡೆ ಸೇಂಗವ ಕಾಳು ॥ ಶೇರಿಸಿ, ಶಿವನು ಪಾರವಾಳ್ಪನೆಂದು ಮುನಿನುಡಿಯುತಿರೆ ಜನ ನೋಡುತ್ತಿರೆ ॥। ೫೨ ॥।

ಮಡಿಯಿಂದ ಮಾಡಿಸಿದ ಸಕ್ಕರಿಯಪೂಪ ಕರಿ । ಗಡಬು ಕಲಸನ್ನ ವಾಲದಿ ಮೊದಲಹುರುಬುತ್ತಿ ॥ ಸಡಗರದಲಿ ಸೊಬರೆತ್ತಿನ ಮೇಲೆ ಹೇರಿಕೊಂಡೋರ್ವ ಗುರುಭಕ್ತನಾಗ ॥। ಗುಡಿಗೆ ಬಂದಲ್ಲಿದ್ದ ಗುರುವಿನಡಿಗೆರಗಿ ತಂ । ದಡಿಗಿಯನು ತಿಳಿಸಲತಿ ಹರಿಸದಿಂದ ದನೆಲ್ಲ ॥ ರೆಡೆಗಳಿಗೆ ನೆರೆನೀಡಿಸಿ ಘನತೃಪ್ತಿಗೊಳಿಸಿದನಿಳಿಯ ಬಾಬೊಳಿದಲೆಯನು ॥। ೫೩ ॥।

ನೋಡಿ ನಿಬ್ಬೆರಗಾಗಿ ಮುಹಿಮೆಕೊಂಡಾಡಿ ನುತಿ । ಮಾಡಿನ್ನು ಧೂಳಿಯಿಂ ಗೂಡೆ, ಪೊಡಮೊಟ್ಟು ಬಿದು ॥ ಸೂಡಿದನಸುಕ್ರಪೆಯಿಂ ಧ್ವಜತೋರಣಾದಿಯಿಂದ ಪರಿಶೋಭಿಸುವೂರೊಳ ॥। ಗಾಡಲೀನ ಮರಾವತಿಯೊಳು ಗೀಪ್ಸತಿಯನ್ನು । ನಾಡೆ ಗೀರ್ವಾಣರೊಲು ನಂದೂರವರು ಮುದಂ ॥ ಗೂಡಿಯಡ್ಡಂದಣದೊಳು ಮೆರೆಸಿದರು ಜಗದಾಚಾರ್ಯ ಚಕ್ರಾಧಿಪನನು ॥। ೫೪ ॥।

ಅಂಗದೊಳು ಶಿವಲಿಂಗವಾವಾಗಲುರೆ ಧರಿಸಿ । ಪಿಂಗದಲೆಪೂಜಿಪುದು ಸಜಲಭಸ್ಮವನು ಮೂ ॥ ರಂಗುಲಿಗಳಿಂ ಹಣಿಯಲಿರಿಸುವದಸಂಗಾರಿಗರ್ಪಿಸಿದವಸ್ತುವನ್ನೆ ॥। ಮಂಗಲಕರವೆನುತುಪಭೋಗಿಸುವದು, ವರಗುರು । ಜಂಗಮರಸೇವೆಯನನುದಿನ ಮಾಡುವದಿದುವೆ ॥ ಲಿಂಗವಂತರ ಧರ್ಮವೆಂದು ನಂದೂರ್ಜನಕೆಬೋಧಿಸಿದನುರುವಿಬುಧನು ॥। ೫೫ ॥।

ಅಕ್ಷಯಾನಂದಘನೆ, ರಕ್ಷಿತಮದನೆ, ವಿರೂ । ಪಾಕ್ಷನಾಮಾಂಕಸದನೆ, ಸರೋಜನಿತವದನೆ, ॥ ರಕ್ಷಿತಾಖಿಲ ಭಕ್ತಜನೆ, ಸುಮುಕ್ತೀಕೃತಮುನೆ, ತುಹಿನ ಮಹೀಧ್ರತನಯೆ ॥। ಸಕ್ಷಮೆ, ವಿಪಕ್ಷ ಶಿಕ್ಷಣ ವಿಚಕ್ಷಣೆ, ಕುರಂ । ಗೇಕ್ಷಣೆಯೆ, ಹರ್ಯಕ್ಷಲಕ್ಷೆ, ಸುಕ್ಷಣ ಲಕ್ಷೆ ॥ ಪ ಕ್ಷಪಿತವೃಜಿನೌಘೆ, ಕಾಮಾಕ್ಷಿ, ಕಾತ್ಯಾಯನಿ, ಶಿವೆ ಪೊರೆಯೌಯೆನ್ನನು ॥। ೫೬ ॥।

ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳೆಂಟ
ನೆಯ ಸಂಧಿ ಪದಂ ೫೬ ಕ್ಕಂ
ಮಂಗಲಮಸ್ತು.





## — ಒಭಂತ್ತನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ— ಸೊನ್ನಲಿಗಿಯೊಳಗುನ್ನತ ವಿಭವದಿನುರೆಮೆರೆದು ।
ಪನ್ನಗಧರನ ತತ್ತ್ವವನುಬೋಧಿಸಿ ಮುದದಿಂ ॥
ತನ್ನೂರ್ಕಡೆಗೆ ಪೋಗಿಶಿವಲಿಂಗದೊಳು ಬೆರೆವನುರು
ಸಿದ್ಧಲಿಂಗಯೋಗಿ ॥೦॥

ಕಮಲಾಕ್ಷ ಕಮಲಸಂಭವಮುಖಾಮರ ಸಮೂ । ಹಮನ.ರೆ ಸದೆಬಡಿದು ಶಿರೆಯೊಳಿಟ್ಟು ಸೊಕ್ಕಿನಿಂ ॥ ಯಮನೆನಿಸಿ ಬ.ವರದೊಳು ನಿನ್ನೊಕ್ಕಲಿಡಬಂದಿಹ ಜಲಂಧರಸುರಾರಿಯ ॥ ವಿಮಲಜಲದೊಳು ಬರೆದಚಕ್ರದಿಂ ಶಿರವರಿದು । ಸುಮನಸರ ಸಂಕಟವಳಿದ ಚಿತ್ರ ಚರಿತನಾ ॥ ದ ಮಹೇಶನೆ ಮದೀಶನೆ ಗತಿಮತಿನೀನೆಂದು ತಿಳಿದೆನ್ನನು ಪೊರೆಸತತ ॥ ೧ ॥

ಹಸಿವುತೃಷೆಗಳಿರದುರು ಕರ್ಮಕಲುಷಗಳಿಲ್ಲ । ದಸಮನಯನಸಮಾನ ಸಿದ್ಧರಾಮೇಶನಿಂ ॥ ವಸುಧೆಯೊಳು ಲಿಂಗಗಳ ನೆಲೆಯಾದ ಸಿರಿಗೆ ತವರಾದ ಪುಣ್ಯದರಾಶಿಯೆ ॥ ನಿಸುವ ವರಮುಕ್ತಿವನಿತಾಕ್ತಿಕಕೆ ಗುರುಶುಕ್ತಿಯಹ । ಪಶುಪತಿಗೆ ಕಸವರದ ಪೊಸಮನೆಯೆನಿಪ ಬುಧ ॥ ಪ್ರಸರಕೆಸದಾಶ್ರಯವು ಸೊನ್ನಲಪುರವಿದು ಭೂಕೈಲಾಸವೆನಿಪುದು ಗಡ ॥ ೨ ॥

ಸುರರಾಜಪುರದಂತೆ ವಿಬುಧಾಲಿಸೇವಿತಂ । ಮುರವೈರಿಯಂತೆ ಕಮಲಾಲಯಾಲಂಕೃತಂ ॥ ಪುರಹರನ ಶಿರದೊಲು ಕಲಾಧರ ಸುರಸರಿತ್ಸಮನ್ವಿತಂ ಮತ್ತೆ ಜಗದಿ ॥। ಸರಸಿಜಾಸನನ ಪುರದಂತೆ ವೇದವಿದರಿಂ । ಪರಿರಾಜಿತಂ, ವಾರಿನಿಧಿಯಂತೆ ಗೋತ್ರೈಕ ॥ ಪರಿಪಾಲಮುಷ್ಣಭಾನುವಿನಂತನಂತ ರತ್ನವೆನಿಸುತೆ ರಂಜಿಸಿದುದು ॥। ೩ ॥

ಜಡಧಿಯು ಜಡಾಶ್ರಯವಹುದಿದರೊಳಿರುವದೆಮಗೆ । ಜಡತನವಿದೆಂದು ಜಲಧಿಯನುಳಿದುಬಂದು ಬಲು ॥ ಸಡಗರದ ಪುರದೊಳಿಹವೇನೆನೆ ಪವಳ, ಮುತ್ತು, ಮಾಣಿಕಗಳನಿಚಯಗಳು ॥। ಕಡು ಶೋಭಿಸಿದವುಮಣಿಗಾರರಂಗಡಿಗಳಲಿ । ಮೃಡನಿಲ್ಲಿ ನೆಲಸಿರಲು ತನ್ನ ಖನು ನಿಧಿಸಹಿತ ॥ ಬಿಡದೆಯ್ಸನೇಕರೂಪವನಾಂತಿರುವನೇನೆನೆ ಧನಿಕರಿರುತಿಹರಲ್ಲಿ ॥। ೪ ॥।

ಮುಂಜಾವಿನೊಳಗೆದ್ದು ಮಜ್ಜನಂ ಗೆಯ್ದುಸಲೆ । ರಂಜಿಸುವ ಮಡಿಯನುಟ್ಟುನೊಸಲೊಳಗೆ ಭಸಿತದ ॥ ಮಂಜುತ್ರಿಪುಂಡ್ರಗಳನಿಟ್ಟು ಕರದಿಂ ಸುಮಕರಂಡವಪಿಡಿದು ಪರತರ ॥। ನಂಜುಂಡನಾಲಯಕೆ ಬಂದವನ ಚರಣಯುಗ । ಕಂಜಗಳಪೂಜಿಸಿ ಪೊಡಮಡುವ ಸುಕೃತ ಸಾಲ ॥ ಭಂಜಿಕೆಗಳಾಂತಿಹ ಜನರಜಯೆರವವು ದಿಗ್ವಲಯವನ್ನು ಭೇದಿಸುವದು ॥। ೫ ॥।

ಸುರಪುರದ ಸುಂದರಿಯರ ಸುಸೊನ್ನಲಪುರಂಧ್ರಿ । ಯರ ರೂಪಸೌಭಾಗ್ಯವೊಂದಿರುವದನ್ನು ತಾ ॥ ವರೆಯಣಬಗನುರೆ ನೋಡಿ ಬಲಸೂಯೆಯಿಂ ಗೂಡಿ ಮನದೊಳು ವಿಚಾರವಮಾಡಿ ॥। ಚಿರತರಹ ಭೇದವಂ ಕಲ್ಪಿಸಿದನೆಂಬುವೊಲು । ಕರವಿವರೊಳೆನೆಯಿಕ್ಕುವದನವರೊಳೆನೆಯಿಕ್ಕ ॥ ದಿರುವಿಕೆಯನುನೆಗಳ್ವನೆಂದು ಧರೆಯಲಿತಿಳಿದವರವನಂ ತೆಗಳುವರಲ ॥। ೬ ॥।





## — ಒಭಂತ್ತನೆಯ ಸಂಧಿ. —

॥ ವಾರ್ಧಿಕ ಷಟ್ಪದಿ. ॥

ಸೂಚನೆ— ಸೊನ್ನಲಿಗಿಯೊಳಗುನ್ನತ ವಿಭವದಿನುರೆಮೆರೆದು ।
ಪನ್ನಗಧರನ ತತ್ತ್ವವನುಬೋಧಿಸಿ ಮುದದಿಂ ॥
ತನ್ನೂರ್ಕಡೆಗೆ ಪೋಗಿಶಿವಲಿಂಗದೊಳು ಬೆರೆವನುರು
ಸಿದ್ಧಲಿಂಗಯೋಗಿ ॥೦॥

ಕಮಲಾಕ್ಷ ಕಮಲಸಂಭವಮುಖಾಮರ ಸಮೂ । ಹಮನರೆ ಸದೆಬಡಿದು ಶಿರೆಯೊಳಿಟ್ಟು ಸೊಕ್ಕಿನಿಂ ॥ ಯಮನೆನಿಸಿ ಬವರದೊಳು ನಿನ್ನೊಕ್ಕಲಿಡಬಂದಿಹ ಜಲಂಧರಸುರಾರಿಯ ॥। ವಿಮಲಜಲದೊಳು ಬರೆದಚಕ್ರದಿಂ ಶಿರವರಿದು । ಸುಮನಸರ ಸಂಕಟವಳಿದ ಚಿತ್ರಚರಿತನಾ ॥ ದ ಮಹೇಶನೆ ಮದೀಶನೆ ಗತಿಮತಿನೀನೆಂದು ತಿಳಿದೆನ್ನನು ಪೊರೆಸತತ ॥ ೧ ॥

ಹಸಿವುತೃಷೆಗಳಿರದುರು ಕರ್ಮಕಲುಷಗಳಿಲ್ಲ । ದಸಮನಯನಸಮಾನ ಸಿದ್ಧರಾಮೇಶನಿಂ ॥ ವಸುಧೆಯೊಳು ಲಿಂಗಗಳ ನೆಲೆಯಾದ ಸಿರಿಗೆ ತವರಾದ ಪುಣ್ಯದರಾಶಿಯೆ ॥। ನಿಸುವ ವರಮುಕ್ತಿವೆಣ್ಮೌಕ್ತಿಕಕೆ ಗುರುಶುಕ್ತಿಯಹ । ಪಶುಪತಿಗೆ ಕಸವರದ ಪೊಸಮನೆಯೆನಿಪ ಬುಧ ॥ ಪ್ರಸರಕೆಸದಾಶ್ರಯವು ಸೊನ್ನಲಪುರವಿದು ಭೂಕೈಲಾಸವೆನಿಪುದು ಗಡ ॥ ೨ ॥

ಸುರರಾಜಪುರದಂತೆ ವಿಬುಧಾಲಿಸೇವಿತಂ । ಮುರವೈರಿಯಂತೆ ಕಮಲಾಲಯಾಲಂಕೃತಂ ॥ ಪುರಹರನ ಶಿರದೊಲು ಕಲಾಧರ ಸುರಸರಿತ್ಸಮನ್ವಿತಂ ಮತ್ತೆ ಜಗದಿ ॥। ಸರಸಿಜಾಸನನ ಪುರದಂತೆ ವೇದವಿದರಿಂ । ಪರಿರಾಜಿತಂ, ವಾರಿನಿಧಿಯಂತೆ ಗೋತ್ರೈಕ ॥ ಪರಿಪಾಲಮುಷ್ಣಭಾನುವಿನಂತನಂತ ರತ್ನವೆನಿಸುತೆ ರಂಜಿಸಿದುದು ॥। ೩ ॥

ಜಡಧಿಯು ಜಡಾಶ್ರಯವಹುದಿದರೊಳಿರುವದೆಮಗೆ । ಜಡತನವಿದೆಂದು ಜಲಧಿಯನುಳಿದುಬಂದು ಬಲು ॥ ಸಡಗರದ ಪುರದೊಳಿಹವೇನೆನೆ ಪವಳ, ಮುತ್ತು, ಮಾಣಿಕಗಳನಿಚಯಗಳು ॥। ಕಡು ಶೋಭಿಸಿದವುಮಣಿಗಾರರಂಗಡಿಗಳಲಿ । ಮೃಡನಿಲ್ಲಿ ನೆಲಸಿರಲು ತಸ್ಸಖನು ನಿಧಿಸಹಿತ ॥ ಬಿಡದೆಯ್ದನೇಕರೂಪವನಾಂತಿರುವನೇನೆನೆ ಧನಿಕರಿರುತಿಹರಲ್ಲಿ ॥। ೪ ॥।

ಮುಂಜಾವಿನೊಳಗೆದ್ದು ಮಜ್ಜನಂ ಗೆಯ್ದುಸಲೆ। ರಂಜಿಸುವ ಮಡಿಯನುಟ್ಟುನೊಸಲೊಳಗೆ ಭಸಿತದ ॥ ಮಂಜುತ್ರಿಪುಂಡ್ರಗಳನಿಟ್ಟು ಕರದಿಂ ಸುಮಕರಂಡವಪಿಡಿದು ಪರತರ ॥। ನಂಜುಂಡನಾಲಯಕೆ ಬಂದವನ ಚರಣಯುಗ । ಕಂಜಗಳಪೂಜಿಸಿ ಪೊಡಮಡುವ ಸುಕೃತ ಸಾಲ ॥ ಭಂಜಿಕೆಗಳಾಂತಿಹ ಜನರಜಯೆರವವು ವಿಘ್ನಲಯವನ್ನು ಭೇದಿಸುವದು ॥। ೫ ॥।

ಸುರಪುರದ ಸುಂದರಿಯರ ಸುಸೊನ್ನಲಪುರಂಧ್ರಿ । ಯರ ರೂಪಸೌಭಾಗ್ಯವೊಂದಿರುವದನ್ನು ತಾ ॥ ವರೆಯಣುಗನುರೆ ನೋಡಿ ಬಲಸೂಯೆಯಿಂ ಗೂಡಿ ಮನದೊಳು ವಿಚಾರವಮಾಡಿ ॥। ಚಿರತರಹ ಭೇದವಂ ಕಲ್ಪಿಸಿದನೆಂಬುವೊಲು । ಕರವಿವರೊಳಿವೆಯಿಕ್ಕುವದನ ವರೊಳಿವೆಯಿಕ್ಕ ॥ ದಿರುವಿಕೆಯನುನೆಗಳ್ವನೆಂದು ಧರೆಯಲಿತಿಳಿದವರವನಂ ತೆಗಳುವರಲ ॥। ೬ ॥।

ಹುಂಣಿವೆಯ ಚಂದಿರನ ಕಿರಣಗಳ ಬೆಳಕಿನೊಳು । ಕಂಣಿಂಗೆ ಕಾಣದಿಹ ಕರುವಾಡಗಳಮೇಲೆ ॥ ತಂಣನ್ನ ಗಾಳಿಗುರೆ ವ್ಯೆಯೊಡ್ಡಿ ಸೆದೆಯನಾರಿಸಲು ಬಂದಿರುತಿರುವ ಕ ॥। ಬ್ಬಂಣದುಡಿಗೆಯ ಕಚದಿ ಪೂಮುಡಿದ ನೀರೆಯರು । ಸಂಣನಡುವಿನ ಬೇಚರಾಂಗನೆಯರಂತದೇಂ ॥ ಬಂಣಿಸಲಿ ಕಾಣಿಸಿದರಲ್ಲಿ ಹರಿಸದಿ ಸಂಚರಿಸುವ ಯುವಕರ ನಿಕರಕೆ ॥। ೭ ॥।

ಸಿದ್ಧೇಶ್ವರ ಭಜನದ ಮನ್ಮಥಸ್ವಾಮಿ ಪ್ರ । ಸಿದ್ಧಭಜನದ ಮಂಡಳಿಯವರುಭಯರು ಬಹಳ ॥ ಬುದ್ಧಿಪೂರ್ವಕ ಮಾಳ್ದ ವ್ಯೆರಿಯುದ್ಧಟಿತನದ ಗದ್ದಲವನಾ ಪೊಳಲೊಳ ॥। ಗಿದ್ದಿಲ್ಲದಂತೆ ಸಗಿ ಬಾರಸಿಗೆಪೋಗಿ ಸ್ವ । ಬುದ್ಧ ಪುರನಾಯಕರನು ಮತಿಯಿಂ ಶ್ರೀಪರಮ ॥ ಸಿದ್ಧಲಿಂಗಜಗದಾಚಾರ್ಯ ಶೇಖರನಿಗುರುಬಿನ್ನಹವನಿತ್ತರವರು ॥। ೮ ॥।

ಬಿನ್ನದೊತ್ತಳಿಕೆಯನು ಮಾನ್ಯಮಾಡಿ ಗುರುವರ । ಸೊನ್ನಲಿಗಿಗ್ಯೆದುದನುತಿಳಿದುನಗರ ಪ್ರಮುಖ ॥ ರುನ್ನತಾನಂದದಿನೆದುರ್ಗೊಂಡು ಸಾಷ್ಟಾಂಗವಿನತಿಯನು ಗ್ಯೆಯ್ದುದಾತರ ॥। ಮನ್ನಣಿಯಪೂರ್ವಕಿಸ್ತಿಕಪಾಲವನ್ನಿತ್ತು । ಚನ್ನೆಸೆವ ಚಿನ್ನದಡ್ಡಂದಣದೊಳಗೆ ತವಸಿ ॥ ಯನ್ನುಕುಳ್ಳಿರಿಸಿ ಸಿದ್ಧೇಶ್ವರಾಲಯದಿಂ ಹೊರಡಿಸಿದ ರುತ್ಸವವನು ॥। ೯ ॥।

ಚಟುಲಗತಿಯ ಹಯಗಳ ಸಾಲ್ಗಳುಬ್ಬಿದ್ದುವುಂ । ತಟಕ್ಯೆದುವ ತೆರೆಗಳಪರಿಯೊಪ್ಪೆ, ಮದಪಂಕ ॥ ಘಟಿತಕರಟತಟದ ಕರಿಯದು ನೀರಾನೆಯೆಂತೆಸೆಯೆ, ಪಲಬಂಣದ ಪೊಸ ॥। ಪಟುರಥಗಳು ಪಡಗಗಳ ಗಡಣದೊಲಿರಲತಿ ನಿ । ಕಟದಿಂದಡಿಯಿಡುವ ಜನತತಿ ತೋಯಧಿಗೆ ಪಾ ॥ ಸಟಿಯಾಗೆ ಗುರುಚಕ್ರವರ್ತಿಯಾರೆ, ಜಲಚಕ್ರವರ್ತಿಯೊಲು ಶೋಭಿಸಿದನು ॥। ೧೦ ॥।

ಸುಧೆಯಿಂದ ಶುಭ್ರಗಳೆನಿಪ ಸೌಧಗಳ ಪಕ್ಕ । ದಿ ದೃಢ
ದಿಂದ ವಿರಚಿಸಿದ ಪಲಬಂಣದ ತೋರ ॥ ಣದ ಸಿರಿಯು, ಬೆಳ್ಳಿವೆ
ಟ್ಟದ ತುದಿಯಲಿರುವ ಬಿಳಿಮೋಡದೊಳು ಮೂಡಿದ ಸುರ ॥ ಪಥ
ಸುವನು ಪಳಿದುದುರುಸೀಗುರಿಯು ಚಾಮರಂ । ವಿಧವಿಧದ ಗುಡಿಕ
ಳಸಕನ್ನಡಿಗಳವು ಸಾಲಿ ॥ ಡಿದುಃಶೋಭಿಸಿದವು ತಾಪಸನುತ್ಸವದೊ
ಳು ನೋಡುವರ ನಯನಗಳಿಗೆ ಸಲೆ ॥ ೧೧ ॥

ಪೊಡವಿಯುಮ್ಮೃಡನೆನಿಸುವ ಮಹಿಮನಮಹೋತ್ಸವವ । ಕ
ಡುತವಕದಿಂ ನೋಡಲೈತರುವ ಬಡನಡುವಿ ॥ ನುಡುಪಮುಖಿಯರ
ಸೋರ್ಮುಡಿಗಳ ಸುಮಗಂಪಿಗಾರ್ದೆರಗಲವ್ವಳಿಸುತಿರುವಾ ॥ ರಡಿ
ಗಳ ಬಳಗಗಳಿಂದ್ರಮಣಿ ತೋರಣಗಳುರು । ಗಡಣಗಳವೆಂಬಪರಿ
ತೋರ್ದವು ಪುನಃ ಕೆಲರು ॥ ನಡಿವ ಪೂಬಳ್ಳಿಗಳ ತೆರದೊಡವೆಗಳ
ನಾಂತು ಸಡಗರದಿನೈತಂದರು ॥ ೧೨ ॥

ಮಾಡುತಿಹಮನೆಗೆಲಸವಲ್ಲಿಯೆನೆ ಬಿಟ್ಟು ತಡ । ಮಾಡದಲೆ
ಕೂಸನ್ನು ದಾಸಿಯಳಕೈಗಿತ್ತು ॥ ನೋಡುವಾತುರದಿಂದ ಕುಪ್ಪ
ಸವನೊಂದೆತೋಳಿಗೆತೊಟ್ಟು ಜಾರ್ವನಿರಿಗೆ ॥ ನಾಡೆಕರದಿಂದೊತ್ತಿ
ಪಾಡ್ವಗೀತವನು ಮ । ತ್ತಾಡುತಿಹ ಲೆತ್ತಮಂ ನಿಲಿಸಿಮಕ್ಕಳು
ಮುದದಿ ॥ ಮಾಡುತಿಹ ನರ್ತನವನುಳಿದುಬಂದುರೆನೋಡಿದರು ನಗ
ರನಾರಿಯರಹೊ ॥ ೧೩ ॥

ಅಂತಕನ ದವಡಿಯೊಳಗೋರಂತೆ ಸಿಕ್ಕಿರ್ದ । ಕಂತುಮರ್ದನ
ಭಕ್ತನ ಮಗುವನು ರಕ್ಷಿಸಿ ನಿ ॥ ತಾಂತ ಸುಖವಿತ್ತ ಭೂಶಿವನಿವನೆ
ನುತ ಬಕುತಿಯಿಂ ವೃದ್ಧೆಯರ ಮುಗ್ಧೆಯ ॥ ರಂತು ನಾಗನ
ಕುಲಗಳ ಕಲಹವನು ಬಿಡಿಸಿ ಸು । ಸಂತೋಷವನ್ನಿತ್ತಿತಿ ದಯಾ
ಯುತನಿವನೆಂ ॥ ದಂತಿಂತೆನದಲಿದ್ದಹಾಗಿರುವನಂ ನೋಡಿ ಬಾಲೆ
ಯರು ನಮಿಸಿದರಹೊ ॥ ೧೪ ॥

ಅಲ್ಲಲ್ಲಿ ಸಂತಸದಿ ನಿಲ್ಲಿಸಿದ ಮಂಟಪಗ । ಳಲ್ಲಿ ಭಕ್ತಿಮಿಗೆಭ
ಕ್ತವರೇಣ್ಯರೊಪ್ಪಿಸಿದ ॥ ಸಲ್ಲಲಿತ ಕಾಣಿಕೆಗಳಂ ಸ್ವೀಕರಿಸುತ
ಫಲಮಂತ್ರಾಕ್ಷತೆಗಳಿಂದವ ॥। ರೆಲ್ಲರನ್ನಾಶೀರ್ವದಿಸುತುಭಯ
ಪಕ್ಕಂಗ । ಳಲ್ಲಿ ಕಿಕ್ಕಿರಿದುನಿಂದು ಶಿರಬಾಗಿ ನಮಿಸುವ ॥ ರು
ಲ್ಲಾಸವಂ ಕಂಡು ನಸುನಗುವ ಗುರುವಿನುತ್ಸವವು ನೆರೆನೆರವೇರಿತು
॥। ೧೫ ॥।

ಶ್ರೀಗುರುವು ಬಂದದಿನ ಶಿವರಾತ್ರಿಯೋಗವೆಂ । ದಾಗಮ
ಜ್ಞರು ಪೇಳುವ ವಚನದಹಾಗೆ ಭವ ॥ ರೋಗ ವೈದ್ಯನೆನಿಸುವ
ಸಿದ್ಧಲಿಂಗಶಿವಯೋಗಿಯನು ಬಿನ್ನಹವನಿತ್ತು ॥। ಭಾಗಧೇಯವು
ನಮ್ಮದೆಂದುತ್ಸವದಲಿ ಕರೆ । ದಾಗ ಪೂಜಿಸಿ ಪಾದತೀರ್ಥವಂ ಸಲಿ
ಸಿ ಜನಿ ॥ ಯೋಗ ಸಫಲವಹುದೆಂದರಿದುಬಕುತರು ಕಾಣಿಕೆಯನಿತ್ತು
ಕಳುಹಿಸುವರು ॥। ೧೬ ॥।

ಒಟ್ಟಾಗೂಡಿಸಿಯೆಲ್ಲರ್ವನ ಮನೆಯೊಳುನಡಸಿದುರು । ಪಟ್ಟಾ
ಧಿಕಾರಿಯ ಚರಣತೀರ್ಥಕೊಬ್ಬ ಬಲು ॥ ಕೆಟ್ಟನರನ್ನೈತರಲು ಕಳ್ಳ
ಗೀತಳ್ಳಿಯೇಕೆಂದು ಕೆನ್ನೆಯೊಳುಬಡಿಯೆ ॥। ತಟ್ಟನವನೆದ್ದು ಪೋ
ಗಿಯೊಡೆಯಗೆ ಕದ್ದಹಣ । ಕೊಟ್ಟು ಬರಲವಗೆ ತೀರ್ಥವನಿತ್ತನು
ಸುಜನರ ॥ ಶಿಟ್ಟು ಕುಜನರ ಸುಜನತೆಗೆ ಕಾರಣಮುದಲ್ತೆ ದಲ್ತಿಳಿಯೆ
ಭುವನದೊಳಗೆ ॥। ೧೭ ॥।

ಒಂದುದಿನ ಭಕ್ತಪುಂಗವರೈದಿ ಸಚ್ಚಿದಾ । ನಂದಘನನಡಿ
ದಾವರಿಗೆರಗುತೆ ಜೀಯ್ಯಾಯ ॥ ಮಂದಸಂಸಾರ ಸಂಬಂಧದ ಬಿಡು
ಗಡೆಯ ಮಹೋಪಾಯವರಿಯದೆಮಗೆ ॥। ತಂದೆ ಬೋಧಿಸುವಕೃಪೆ
ಯಾಗಬೇಕೆಂದುದಂ । ತಂದು ಮನಕನಿಮಿತ್ತ ಬಂಧು ಗುಣಸಿಂಧು
ಗುರು ॥ ವೊಂದುದಿನ ಮಲ್ಲಿಕಾರ್ಜುನನಾಲಯದೊಳಗುಪದೇಶಕಾ
ರಂಭಿಸಿದನು ॥। ೧೮ ॥।

ಕ್ರಿಮಿಕೀಟ ಮೊದಲಾದ ಸರ್ವಜೀವರುಗಳೊಳ । ಗಮಿತಬುದ್ಧಿಯೊಳು ಮಾನವನಧಿಕನವನಕಿಂ ॥ ತಮನೋಜ್ಞಧರ್ಮದಿಂ ವೀರಶೈವನಧಿಕನವನ ಬಹುಭವಗಳಲಿ ಸಲೆ ॥। ಸಮನಿಸಿದ ಸುಕೃತದಿಂ ಮಾಯಾಮಯಕೃತಿಯುಪ । ಶಮವಾಗೆ ಪರಶಿವನನುಗ್ರಹದ ಬಲದಿಂದ ॥ ವಿಮಲಮಾನಸದೊಳಗೆ ಭವಬೀಜಹುರಿವ ಶಿವ ಭಕ್ತಿಯುದ್ಭವಿಸುವದಲ ॥। ೧೯ ॥।

ಚಿತ್ತದ ಕಲಂಕನಿಲ್ಲದ ನಿತ್ಯನಿತ್ಯವ । ಸ್ತೂತ್ತಮ ವಿಚಾರ ಪರನಾದ ಮನುಜೋತ್ತಮನ ॥ ಚಿತ್ತದೊಳು ಸುಕೃತವಾಸನೆಯ ಬಲದಿಂ ಸಂಸೃತಿಯೊಳಗೆ ವಿರಾಗಮುದಿಸಿ ॥। ಮತ್ತೆ ಜನ್ಮವುಜರೆಯು ಮತ್ತೆಸಾವಪ್ಪುದೈ । ಮತ್ತೆ ಮತ್ತೆ ಶರೀರಕದರಿಂದಿದು ಭುವನದಿ ॥ ಮತ್ತೆ ತೋರಿಯಡಗುವ ಮಿಂಚಿನಂತೆ ಬಲುನಶ್ವರವೆಂದವನರಿಯುವನು ॥। ೨೦ ॥।

ಪರಮಾತ್ಮನೋರ್ವನೇ ನಿತ್ಯನವನಿಂದ ತನ । ಗಿರದೆಬಪುವ ಸುಖವೇ ನಿತ್ಯಸುಖವೆಂದು ಹೃದಿ । ನೆರೆನಂಬಿರುವ ನರವರನು ನೀರಮೇಲಿರುವ ಗುರುಳಿಯಂತೆ ತೆರೆಯಂತ ॥। ಚಿರರುಚಿಯ ಪರಿ ತೋರಿಯಡಗುತಿಹ ವ.ತ್ತೆಮಲ । ಭರಭರಿತ ಕುಂಭದಂತತಿ ಹೇಯವಾದದು ॥ ಪ್ಕರ ಕಲತ್ರಸುಪುತ್ರ ಮಿತ್ರಸಂಪದಮೊದಲೆನಿಪುದರೊಳು ವಿರಸನಹನು ॥। ೨೧ ॥।

ಈ ವಿಚಾರದ ವಿರಾಗಯುತನು ಸ್ವಸ್ವರೂ । ಪಾವನಿಂದದೊರೆಯುವದಾಗುರುವಿನೆಡೆಗೈದಿ ॥ ಭಾವದಿಂ ಪೊಡಮಟ್ಟವನು ಸುಪ್ರಸನ್ನನಾಗುವವರಿಗೆ ಸೇವೆಗೆಯ್ದು ॥। ಭಾವವರಿದಿರದೆ ಭೋಕಲ್ಯಾಣ ಶೋಭನ ಗು । ಣಾವಭಾಸಿತ ಭೋ ಮಹಾಭಾಗ ಕಾಪಾಡು ॥ ದೇವ ಸಂಸೃತಿ ಮಹಾರೋಗಬಾಧಿತನೆನ್ನನೆಂದು ವಿಜ್ಞಾಪಿಸುವನು ॥। ೨೨ ॥।

ಗುರುವರೇಣ್ಯನವನಾಗರಿದು ಶಕ್ತಿಪತನವ । ನಿರದೆವೇಧಾದಿ
ತ್ರಿವಿಧ ದೀಕ್ಷೆಯನ್ನಿತ್ತು ॥ ಪರಮೋಪದೇಶದಿಂ ಮುಕ್ತಿಗೆ ಸುಪಾ
ತ್ರನಂ ಮಾಡುವನವನನು ಬಳಿಕ ॥ ವರಭಸ್ಮ ರುದ್ರಾಕ್ಷ ಧರಿಸಿ
ಪಂಚಾಕ್ಷರ ಸು । ಕರಮಂತ್ರವನು ಜಪಿಸುತಿಷ್ಟಲಿಂಗವ ಪೂ
ಜಿ ॥ ಪುರುವಿಶುದ್ಧಾಚಾರ ಸಂಪನ್ನನಾದವನು ಭಕ್ತನೆನಿಸುವನು
ಜಗದಿ ॥ ೨೩ ॥

ಸುಕೃತಿಗಳಿಗೆ ಸುಲಭವಸುಕೃತಿಗಳಿಗದಸುಲಭ । ವು ಕುವಲ
ಯದೊಳಗೆ ಶ್ರವಣಮುಖಾತ್ಮನಿವೇದ ॥ ನ ಕಡೆಯಾಗಿಹ ಶಂಭು
ವಿನ ನವವಿಧಹ ಭಕ್ತಿಯಿಂ ಭೂಷಿತನುರುಶಿವನ ॥ ಬಕುತಿಯಿಲ್ಲ
ದವರೊಡನಾಟವಿರದನ್ಯದೈ । ವಕೆ ಕೈಮುಗಿಯದ ಚರ್ಮದ
ಪಾತ್ರೆಯೊಳು ಜಲಾ ॥ ದಿಕವನುಪಯೋಗಿಸದೆಸಗಿದ ಪೂಜಾದಿಫ
ಲವನಪೇಕ್ಷಿಸದಿರುತಿರುವ ॥ ೨೪ ॥

ಒಂದೆಮೂರ್ತಿಯೊಳು ಮೂರಾದಗುರುಲಿಂಗಚರ । ರೆಂದೆಂಬ
ಪೂಜ್ಯರನು ಭಕ್ತಿಯಿಂ ಪೂಜಿಸುತ ॥ ಲೊಂದೆಮನದಿಂದವರ ಪಾದ
ತೋಯಪ್ರಸಾದಗಳೆಂದವ ತಿಳಿದಮೃತ ॥ ವೆಂದುಭವಭೇಷಜ
ವಿದೆಂದು ಸತತ ಭಜಿಸುತ । ಕುಂದಿಲ್ಲದಿಹ ಮೂರನೆಯದಾನಮಂ
ಕೊಡುತ ॥ ಮುಂದಾಮುಲಾಚಾರ ಸಂಪನ್ನವರವೀರಶೈವನೇ ಭಕ್ತ
ನಹನು ॥ ೨೫ ॥

ಈತೆರದಲಾಚರಿಸಖಿಳ ಕರ್ಮಗಳ ಫಲವ । ಭೂತಪತಿಶಿವ
ನಿಗರ್ಪಿಸುತೆ ಹುರಿದಿಹಬೀಜ ॥ ರೀತಿಯಂತೆ ಜಗದೊಳು ನಾಮ
ಮಾತ್ರದಲಿ ವ್ಯವಹರಿಸುತಲೊಮ್ಮೊಮ್ಮೆ ನಿ ॥ ವಾತದೀಪದಹಾಗೆ
ತೆರೆಯಿಲ್ಲದ ಕೆರೆಯೊಲು । ಸಾತಿಶಯವಾದ ನಿಶ್ಚಲಚಿತ್ತವೃತ್ತಿ
ಯಿಂ ॥ ದಾತುಮನೊಳೈಕ್ಯಸುಖವನನುಭವಿಸುವ ಭಕ್ತನುವಿಮು
ಕ್ತನಾಗುವನಲ ॥ ೨೬ ॥

ಆಗಮಗಳಂತ್ಯದೊಳು ಶಿವನೊರೆದ ಸಿದ್ಧಾಂತ । ವೀಗ ಪೇಳಿದೆವು ನಿಮಗೊಲಿದು ಸಲೆನಿಶ್ಚಿಂತ ॥ ರಾಗಿಯದರಂತೆ ಗುರುಮುಖದಿಂದ ತಿಳಿದಳಿದು ಮಾಯಾದಿ ಮಲಗಳನುರೆ ।॥ ನೀಗಿತಾಪತ್ರಯದ ಬೇಗೆಯನು ಭಾವನಾ । ಯೋಗದಿಂ ಕೀಟವು ಭ್ರಮರವಾದಂತೆ ಶಿವ ॥ ನಾಗಿ ಸೋಹಂಭಾವ ಬಲದಿಂ ವಿರಾಜಿಸರಿ ನೀವೆಂದುಸುರಿದನು ಗುರು ।॥ ೨೭ ।॥

ತಾಪಸೋತ್ತಮ ನಿನ್ನವಚನಾಮೃತೌಷಧಿಂ । ತಾಪತ್ರಯಾನಲವಣಗಿತು ಸಲೆವಾಸನಾ ॥ ರೂಪದಿಂದಿರುವೀಶಭಕ್ತಿಬೀಜವದಿಂದು ಮೊಳತೆದ್ದಿತು ಹೃದಯದೊಳು ।॥ ದೀಪದೊಲು ಹೊಳೆಯುತಿಹ ದಾಸಭಾವವದು ಸುಖ । ರೂಪವಾಗಿ ಸುಧಾಂಶು ಕಳೆಯಂತೆ ಬೆಳೆಯಲೆಂ ॥ ದಾಶರಿಯ ಲಾಶಿಸುವೆವು ಕರುಣಿಸುವದೆನುತೆ ಗುರುವಿನಡಿಗೆರಗಿ ಪೋದರು ।॥ ೨೮ ।॥

ಆವನರ್ಥಿಗಳಲ್ಲಿ ನಾಕಿಪಾದಪನೊ ಮ । ತ್ತಾವನಂ ಬುಧರು ವಿಬುಧನೆನುತಿಹರು ಭುವನದೊ ॥ ಳಾವನಿಂ ವೀರಶೈವಮತಮುದ್ಧೃತವಾಯಿತು, ಸ್ವಸ್ತಿವಚನವನು ಸ ।॥ ದಾವನಿಗೆ ಗುರುಗಳುಸುರುವರಾವನ ದೆಶೆಯಿಂ । ಪಾವನವು ಕುಲವು ತಿಳಿಯಲುದಿವಾರಾತ್ರಿಯೊಳ ॥ ಗಾವನ ಯಶಶ್ಶಶಿಯು ಬೆಳಗುವನೊ ಸುಜನತೆಯು ತೋರ್ಪದಾವನೊಳಗೊಡೆದು ।॥ ೨೯ ।॥

ವಾರದಾಮ್ನಾಯ ಸುಧಾಪಾರಿಧಿಗೆ ಪೂರ್ಣಿಮಾ । ಶಾರದ ಶಶಧರನಹ ಮಲ್ಲಪ್ಪನೆಂಬ ವರ ॥ ಚಾರುನಾಮವನಾಂತಿಹಾಪುಣ್ಯಪೂರುಷನು, ಶಾಲಿವಾಹಶಕದ ಸದು ।॥ ದಾರ ಪದಿನೆಂಟುನೂರರಲಿಸುನೆಲೆಗೊಳಿಸಿದ । ವಾರದುರುತರ ಪಾಠಶಾಲೆಗೈದುಸಹಸ್ರ ॥ ಸಾರಹಣವಿತ್ತು ಚಿರವಾಗಿರಲಿದೆಂದು ಹರಸಿದರಾ ಜಗದ್ಗುರುಗಳು ।॥ ೩೦ ।॥

ಭಿಕ್ಷಾಟನದ ಲೀಲೆಗಾಗಿ ಬಂದಿಹ ವಿರೂ । ಪಾಕ್ಷನಂ ಪೂಜಿಸಿ ಸುರಸಮೂಹದಿಂ ಸಹ ॥ ಸ್ವಾಕ್ಷನಂತಬ್ಬುಲಪುರದುರು ಸಿರಿವಂತ ನಹ ನಾಗಪ್ಪನೆಂಬ ಪುರಾ ।॥ ಧ್ಯಕ್ಷನಖಿಲ ಪುರಜನರಿಂ ಕೂಡಿ ಭೂಮಿಭಾ । ಳಾಕ್ಷನಂ ಹೃದಿಲಕ್ಷಿತೇಶನಂ ಗುಣಿನಮೂ ॥ ರ್ಧ್ವಾರ್ಕ್ಷತಿಲಕನನು ವಿಧಿಯಿಂದ ಪೂಜಿಸಿ ಕಳುಹಿಸಿದನು ಜನ ಜಯ ಜಯವೆನೆ ।॥ ೩೧ ।॥

ಅಲ್ಲಿಂದ ಪಯಣವನು ಬೆಳಿಸಿ ದಾರಿಯೊಳಗ । ಲ್ಲಲ್ಲಿ ಬಕುತಿಯಲಿ ಬಂದಾರಾಧಿಸಿ ಬಕುತರು ॥ ಸಲ್ಲಿಸಿದ ಕಾಣಿಕೆಯನಾದರಿಸಿ ಮತ್ತವರ ಬಯಕೆಯನು ಪೂರೈಸುತೆ ।॥ ನಿಲ್ಲದೈತರುವಾಗ ಕಾಣುವ ಶಿವಾಲಯಗ । ಳಲ್ಲಿ ನಿಂದು ನಿಜಶಿವಲಿಂಗದ ಸಮರ್ಚನೆಯ ॥ ನುಲ್ಲಸಿತ ವೃತ್ತಿಯಿಂ ಮಾಡುತ್ತ ಪಾಡುತ್ತ ಗುರುವಾತ್ಮ ಮಠಕೈದಿದ ।॥ ೩೨ ।॥

ಒಂದುದಿನ ಬಾಲೇಂದುಭೂಷಣನ ಪೂಜೆಯಿಂ । ದಂದುದಿಶಿದಾನಂದವೃತ್ತಿ ಬಲಿದು ಸಮಾಧಿ ॥ ಯಂ ಧರಿಸಿ ಮೂರುದಿನಗಳು ಗತಿಸೆ ನಾಲ್ಕನೆಯ ದಿನದಿ ಕೊಟ್ಟೂರಿನಿಂದ ।॥ ಬಂದ ಮಠಜೀವಾಳದಂತಿದ್ದ ಸುಗುಣಮಣಿ । ಸಿಂಧು ಜಾಗಟಗೇರಿ ದೊಡ್ಡವೀರಪ್ಪಯ್ಯ ॥ ನೆಂದೆಂಬುವ ಸಿರಿವಂತನು ಪೂಜೆಯ ಮನೆಬಾಗಿಲ ಕದವ ಬುದ್ಧಿ ಬುದ್ಧಿ ।॥ ೩೩ ।॥

ಯೆಂದು ಬಹುಗಟ್ಟಿಯಾಗಿ ಬಡಿವದರಿಂ ವೃತ್ತಿ । ಬಂಧಸಡಲೆಚ್ಚತ್ತವಡುಗಚ್ಚುತೆ ಬಲು ಶಿ ॥ ಟ್ಟಿಂದ ಪಾದುಕೆ ಪಿಡಿದು ಕದವತೆರೆದು ಬಡಿಯಲು ಬೆನ್ನಟ್ಟಿ ಮುಂದುಗಾಣ ।॥ ದಂದೋಡುವನನು ಮುಟ್ಟಿಬಡಿಯಲು ಶಿರಬಾಗಿ । ಯೊಂದುಮಾತನುಸುರದೆ ಸುಮ್ಮನುರೆ ನಿಂತ ನಯ ॥ ಸಾಂದ್ರನಂ ಶ್ರೀರುಂದ್ರನಂ ದೊಡ್ಡವೀರಪ್ಪನಂ ತಪೋಧನಮುಖ್ಯನು ।॥ ೩೪ ।॥

ನೋಡಿ ಹೃದಯದೊಳು ದಯಗೂಡಿ ಯೆಲವೋ ನೀನು ।
ಗಾಡಿಕಾರ್ತಿಯೊಡನೇಕಾಂತದೊಳಗೇಕಾಂತ ॥ ಕೂಡಿಮಾಡಿದ
ಸುಖಾನುಭವವಕೆಡಿಸೆ ನಿನಗೆ ಸಿಟ್ಟುಬರುವಂತೆ, ರಹಸಿ ॥। ಮಾಡು
ವಭ್ಯರ್ಚನಕೊಲಿದಿಹ ಲಿಂಗಪ್ರಿಯನ । ನಾಡೆ ವರನೋಟಕೂಟದ
ಪರತರಾನಂದ ॥ ಪಾಡಲೇಂ ಕೆಡಿಸೆ ಕೋಪವೊದಗುವದೆಂದನೀತನೆ
ಲಿಂಗನೋಹಿಯಲ್ತೆ ।॥ ೩೫ ।॥

ಆವರೋಗದ ಮನುಜನಾಗಿರಲವನತಿ ಸ । ದ್ಭಾವದಿಂ ಬಂದೆ
ರಗಿ ಬೇಡಿಕೊಳ್ಳುತಿರಲಾ ॥ ಗಾವಿಶಿಷ್ಟಾಮಯವನು, ಭವರೋಗ
ಹರ ಭಸಿತವನಿತ್ತು ಪರಿಹರಿಪನು ।॥ ಭೂವಲಯದೊಳು ಮಕ್ಕಳಿ
ಲ್ಲದುರು ದುಃಖಪಡು । ವಾವ ಜನವಾಗಲದು ಸುಮನದಿಂ ಭೂ
ಮಹಾ ॥ ದೇವನಿತ್ತಾವಿಭೂತಿಯನು ಸೇವಿಸಿ ಸಂತತಿಯನು ಪಡೆ
ದು ನಲಿಯುವದು ।॥ ೩೬ ।॥

ಉರ್ವಿಯೊಳು ವರ್ತಿಸುವ ವೀರಶೈವಮತದೊಳು । ಸರ್ವ
ತೋಮುಖವಾಗಿ ಶಿಕ್ಷಣಪ್ರಸರವದ ॥ ಪೂರ್ವರೀತಿಯಲಿ ಸಾಗಿ
ಯದರ ಪ್ರಗತಿ ಬೆಳೆಯುವದರುದ್ದೇಶದಿಂದ ।॥ ಶರ್ವಭಕ್ತರು
ಸಲ್ಲಿಸುವ ಪಾದಗಾಣಿಕೆಯ । ಖರ್ವಭಾವದಲ್ಲೆಲ್ಲವನ್ನು ಪದೆದಲ್ಲ
ಲ್ಲಿ ॥ ತೋರ್ವ ಶಿಕ್ಷಣ ಸಂಸ್ಥೆಗಳಿಗಿತ್ತನಹೊ ಮಹಾದಾನಿ ಮನುಜ
ಗುರು ವರನು ।॥ ೩೭ ।॥

ಮಿಗಿಲು ವಸ್ತ್ರಂಗಳೊಳ್ಪಿಳಿದು, ಕುಸುಮಂಗಳೊ । ಳ್ಮಗಮ
ಗಿಪ ದುಂಡುಮಲ್ಲಿಗೆಯು, ಋತುಗಳೊಳಗತಿ ॥ ಸೊಗಯಿಪವಸಂತ
ಸಮಯ, ಧನುರ್ಧರರುಗಳಲಿ ಪೂಬಿಲ್ಲನು ಜಗದೊಳಗೆ ।॥ ನಗಗ
ಳೊಳು ರೋಹಣವು, ಪಶುಗಳಲಿ ಸುರಧೇನು । ವಗಿನಿಮೊಗದವರೊ
ಳಗಗಿನಿ ಗಂಣನು, ಸುಖಗಳೊ ॥ ಳಗೆ ಮುಕ್ತಿ ಸುಖವು, ಗುರುಸಾ
ರ್ವಭೌಮರೊಳು ಗುರುಸಿದ್ಧಲಿಂಗನತಿ ಮಿಗಿಲು ।॥ ೩೮ ।॥

ಸಿದ್ಧಲಿಂಗನೆನಲವನೊಳಗಿದ್ದ ಕಲ್ಮಷವ । ದೆದ್ದುಪೋಗಿ ಪರಿಶುದ್ಧನೆನಿಸುವನವನತ್ಯ ।। ಬುದ್ಧನಿರೆ ಬುದ್ಧೋತ್ತಮನೆನಿಪ ನು ಸಿದ್ಧಲಿಂಗನ ಪೂಜೆಯು ಸಲೆ ಮುಕ್ತಿ ।।। ಮುಗ್ಧಯನು ವಶ ಗೊಳಿಸಿಯೊಪ್ಪಿಸುವ ಕೆಲಸದಿ ವಿ । ದಗ್ಧೋತ್ತಮ ಸಖಿಯಾಗಿರು ವದು ಭುವನದೊಳು ॥ ಶ್ರದ್ಧೆಯಿಂದ ಭಜಿಸುವರ ಬಯಕೆಯನು ಕೊಡುವನು ಬಿಡುಗಂಣರ ಗಿಡದಂತೆ ॥। ೩೯ ।।।

ಅತ್ತಿತ್ತಲೋಕದೊಳು ಬಿತ್ತರಿಸಿ ತೋರುತಿಹ ।। ಸತ್ಯದೊಬ್ಬ ಳಿಯ ಮಾಡೆತ್ತಿ ವಿಧಿಯು ವಿರಚಿಸಿ ।। ದುತ್ತಮಹ ಮಾತಾಡುತಿಹ ಪುತ್ಥಳಿಯನೆಂಬುವಂತಿರುವ ಗುರುವಿನನ್ನು ।।। ಚಿತ್ತದೊಳು ನೆನೆದು ನಲಿವರು ಕೆಲರು, ಗುಣಗಣವ । ನೆತ್ತಿ ಪೊಗಳುವರು ಹಲವರು, ಬಕುತಿ ಭಾವದಿಂ ॥ ನೆತ್ತಿಯೊಳು ಗಂಗೆಯಂ ಪೊತ್ತನಸರಾವತಾರ ನಿವನೆಂದುಲಿಯುತಿಹರು ॥। ೪೦ ।।।

ಗುರುವರೇಣ್ಯನು ಚರಿಸುತಲಿ ಕೊನಬೇನೂರೊ । ಳಿರುತಿರು ವ ಸಮಯದೋಳೊಂದುರಾತ್ರಿಯೊಳಿಂದು ।। ಶಿರನನು ಚರವರನಹ ಪಾರಿಷದನು ಕನಸಿನೊಳು ಬರುತೆದ್ದು ನಯದಿಂ ನಿಂ ।।। ದಿರುವ ಜಗ ದಾಚಾರ್ಯನಂ ನೋಡಿ ಕೈಲಾಸ ।। ಗಿರಿಗೆ ನಿಮಗೆಬರಲಪ್ಪಣೆಯು ಪುರಹರನದಾ ।। ಗಿರುವದು ನಿಜವಿದೆಂದುಸುರಿ ಶೂಲಿಯುನುಗನಂತ ರ್ಧಾನವನೈದಿದ ।।। ೪೧ ।।।

ಬಳಿಕ ಮುನಿಮುಕುಟಮಣಿ ಯೆಚ್ಚತ್ತುನೋಡುತಿರೆ। ಗಳಿಲ ನವ ಮಾಯವಾದುದನು ತಿಳಿದಿದು ಕನಸು ।। ವೊಳಿತಹುದು ತನ್ನ ಬಳಿಗೆ ಕರೆಯಕಳುಹಿಸಿದವನು ಪರಶಿವನವನಪ್ಪಣೆ ॥। ಯಿಳಿಯೊ ಳಗೆ ಪಾಲಿಸದವನು ಜಘನ್ಯಮನುಜನು । ತಿಳಿಯೆ ಯುಣಲೆಂದು ಕೃಪೆಯಿಂ ಕೊಡುವಮೃತಬಿಟ್ಟು ।। ಪುಳಿಯನೆಳೆಸುವದು ಮನು ಜತನವಲ್ಲವದರಿಂ ನಾನೆ ಧನ್ಯನು ಜಗದೊಳು ॥। ೪೨ ॥।

ಎಂದಾದರೊಂದುದಿನ ನಂದಿಯೆಡಗುವ ದೇಹ । ವೆಂದೆಂದು ನಂಬದೆ ದಯಾಸಿಂಧುವನಿಮಿತ್ತ ॥ ಬಂಧುವಾದಿಂದುಚೂಡನ ಪದಾಂಭೋಜಾವಲಂಬನದ ಸುಖವನು ತವೆ ॥ ಪೊಂದಿ ಮುಕುತಿ ಮುಗುದೆಯರಸನಾಗಿರುವೆನೆಂಬ । ಕಂದುಗೊರಲನುಪಾಸಕನ ಮಹಾನಂದವ ॥ ನ್ನಂದು ಕೆಡಿಸಿತು ತಾಮ್ರಚೂಡರವವು ಬಳಿಕೆದ್ದನುಷ್ಠಃಸಮಯದ ವಿಧಿಗೆ ॥ ೪೩ ॥

ಅಂದಿನ ಜಗದ್ಗುರುವಿನಾನನೇಂದು ಕಳೆಯದು । ಬಂಧನದೊಳಿಪ್ಪವನ ಬಿಡುಗಡಿಯ ದಿನದಿ ಮುಖ ॥ ದಂದವನು ಹೋಲುತ್ತಿ ಹೊಳೆಯುತಿದ್ದಿತು ಮುಂದೆರಡುಮೂರು ದಿನಗಳಲ್ಲಿ ॥ ಬಂದಿರಲುರಿಯು ಶರೀರದೊಳಗಲ್ಲಿಂದ ಶಿ । ಬ್ಬಂದಿಯೊಡನೆ ತುರುನೂರಿಗೆ ಬಂದಬಳಿಕಲ್ಲಿ ॥ ಮಂದೇತರವೆನಿಸಲು ಪುರದವರು ಕರೆಸಿದ ಭಿಷಗಧಿಪತಿಯೀಕ್ಷಿಸಿ ತವೆ ॥ ೪೪ ॥

ಬೇಗನಿವರನು ಸಾಗಿಸುವದು ಸಂಸ್ಥಾನಮಠ । ಕಾಗೀಗಳೆಂದು ಕಾಲಕಳೆಯದೆ ಬರಿದೆ ಯೆಂ ॥ ದಾಗುಸುರಿ ಪೋಗಲು ಪುರದ ನಾಯಕರು ತಂತಿಯನು ಕೊಟ್ಟಿರತಿಗಳಿಲನೆ ॥ ಸಾಗಿ ಬಂದನು ವೀರಸಿಂಹಾಸನಾಧೀಶ । ನಾಗಮಿಸಿದನುರು ಕೇದಾರಗುರು ಹೊಳಗುಂದಿ ॥ ಭೋಗಿ ಗೌಡ, ವರಕಾಶೀನಾಥಶಾಸ್ತ್ರಿಯಾ ತುರುನೂರಿಗಾತುರದಲಿ ॥ ೪೫ ॥

ನೋಡಿ ಗುರುವಂ ಬಾಡೆ ಸರ್ವರ ಮುಖಗಳು ಧೃತಿ । ಯೋಡೆ ನಿಲ್ಲದೆಬಯಕೆಯು ಬರಿದಾಗೆ ಮುದಕೆ ॥ ಬೀಡಿಲ್ಲದಾಗೆ ಗುರುಜನದಪಾಂಗಿಂಗಾಲದಂತಾಗಲೆಲ್ಲವನ್ನು ॥ ನಾಡೆ ತಾನೋಡಿ ತಾಪಸ ಶೇಖರನು ಪೇಳ್ದ । ನಾಡಲೇಂ ನೀವೀ ಪರಿ ತಿಳಿಯದವರೊಲು ಸಲೆ ॥ ಮಾಡುವದು ಚಿಂತೆಯುಚಿತವೆ ರೂಢಿಯೊಳುಪುಟ್ಟಿದಾತ್ಮಗೆ ಮೃತಿಯು ತಪ್ಪದು ॥ ೪೬ ॥

ಪುಟ್ಟಿದವರೆಲ್ಲನಟ್ಟಹ ಕಲ್ಲಿನೊಲು ನೆಲದಿ । ಗಟ್ಟಿಯಾಗಿ ರುತಿರಲವರಿಗಿರಲು ಪೃಥಿವಿಯಿದು ॥ ಪುಟ್ಟದಾಗಿರೆ ನೋಡಿ ಪುಟ್ಟಿಸಿದ ಪೊಂಬೊಡೆಯನು ಸ್ವೀಯಪಟ್ಟಣವನು ॥। ಬಿಟ್ಟು ಬೇಗನೆ ಪಲಾಯನ ಸೂಕ್ತವಂ ಸುಷ್ಟು । ಗಟ್ಟಿಯನೆ ಪಠಿಸಬೇಕಾದರಿಂದಿಹದೊಳಗೆ ॥ ಪುಟ್ಟುಸಾವುಗಳೆರಡು ದೇಹಂಗಳ ಧರ್ಮಗಳಹುದರಿಂ ಮಠಕೆ ಪೋಪುದು ॥। ೪೭ ॥।

ಎಂಬುಕ್ತಿಯಂ ನಂಬಿ ವೋಟಾರಬಂಡಿಯೊಳ್ । ಗಿಂಬಾದ ಪೂಪಾಸಿಗೆಯೊಳು ಮಲಗಿಸಿ ಗುರುವಿ ॥ ಗಿಂಬಾಗಿಕುಳಿತುಕರೆತಂದರು ಮಠಕೆ ಮುನಿಕುಲದ ಮಾನ್ಯನನ್ನಾಗಲೆ ॥। ನಂಬಿಗೆಯ ಮಾನವರು ಗುಂಪು ಗುಂಪಾಗಿತವೆ । ಹಂಬಲವು ಹೆಚ್ಚಾಗಿ ಬಂದುನೋಡುತಲವರು ॥ ಕಂಬನಿಗರಿಯಲು ನೆಲವು ಬಲುಪಸಿಯಾದುದಿಳೆ ವೆಂಣಿನಳಲಿಂದೇನೆನೆ ॥। ೪೮ ॥।

ಸಂಗತ ಶ್ರೀನೃಪತಿಶಾಲಿವಾಹನ ಶಕದ । ಭಂಗಪದಿನೆಂಟು ನೂರೈವತೇಳುಯುವಾಬ್ದ ॥ ತುಂಗ ಪೌಷದ ಮಾಸಕೃಷ್ಣಪಕ್ಷದ ಚೌತಿ ತಿಥಿಯ ರವಿವಾಸರದೊಳ ॥। ಪಾಂಗು ಮುಂಜಾವಿನುರುವೇಳೆಯೊಳು ಗಂಗೋತ್ತು । ಮಾಂಗನಾಕಾರವನು ನೋಡುತಲಿ ಹೃದಯದೊಳು ॥ ಸಂಗರಹಿತ ಶಿವಲಿಂಗದೊಳಗೆ ನೆರೆಬೆರೆದನು ಸಿದ್ಧಲಿಂಗ ಗುರುವರನು ॥। ೪೯ ॥।

ಮಿಸುಪ ಮತವಿಮಲಸೌಭಾಗ್ಯ ಲಕ್ಷ್ಮೀವದನ । ಬಿಸಜವು ಮುಕುಲಿತವಿರೆ, ಮೋಹಾಂಧಕಾರಚಯ ॥ ಪಸರಿಸೆ ಸುಜನಹೃದಾಕಾಶದೊಳು, ಬುಧರಥಾಂಗವಿಹಂಗಗಳತಿ ಮುದವು ॥। ತುಸುವುಳಿಯದಂತೆ ಬಯಲಾಗೆ, ದುರ್ಹೃದದಿವಾಂ । ಧವಿಸರದೊಳುಲ್ಲಾಸವುಲ್ಲಸಿತವಾಗುತಿರೆ ॥ ವಸುಧೆಗುಪಕಾರಿ ಗುರುಭಾಸ್ಕರನು ಭುವನದಳಲು ಕಡಲೊಳಗೆ ಮುಳಗಿದನು ॥। ೫೦ ॥।

ದಿವ್ಯಾಭಿಷೇಕಮಂ ಗೈದು ಭಜಕತಿಲಕರು । ಭವ್ಯಭಾಲಾದ್ಯಂಗಗಳಲಿ ಭಸಿತವ ಧರಿಸಿ ॥ ಸೇವ್ಯಗಳೆನಿಪ ಶಿವಾಕ್ಷಗಳನಳವಡಿಸಿ ಸಲೆ ಕಾಷಾಯವಸ್ತ್ರವನ್ನು ॥। ನವ್ಯಮೆನೆಯುಡಿಸಿ ಪೂಸರಗಳಿಂ ಭೂಷಿಸಿ ಸು । ಹವ್ಯವಾಡಕ್ಷನಂ ಹೇಗೊಹಾಗೆ ಸಲೆ ಭ ॥ ಕ್ತ್ಯವ್ಯವಹಿತದಿ ಪೂಜಿಸಿ ಗುರು ತನುವಂ ಭೂತಿಯ ಸಮಾಧಿಯೊಳಿರಿಸಿದರು ॥। ೫೧ ॥।

ಜಯಸಿದ್ಧಲಿಂಗ ಶರಣಾಗತಭವವಿಭಂಗ । ಜಯಪರಾಜಿತಮಹಾನಂಗಮದ ಸುಖಲಿಂಗ ॥ ಜಯಜಯಾ ಹರಹಸ್ತಸಪೂಜಿತಕರವಿಧೃತ ಕುರಂಗ, ಕರುಣಾಂತರಂಗ ॥। ಜಯ ಜನೀನ ಮಹಿಮಾಸ್ಪದ, ಲಿಂಗಸಂಗಾಂಗ । ಜಯಮಂಗಲ ಮಯಾಂಗ ಮಾಯಾವಿನಿಸ್ಸಂಗ ॥ ಜಯ ಯಶೋಧವಲೀಕೃತಾಕಾಶಕೇಶಗಲ, ಸದಯಶೀಲ ಗುಣತುಂಗ ॥। ೫೨ ॥।

ಭೂಮಹಿತರಾದ ರೇವಣಮುಖ್ಯ ಗುರುಸಾರ್ವ । ಭೌಮರ್ಕೈವರು, ಪಡ್ವಿಡಿಮೊದಲಹ ಸೂತ್ರಪರು, ॥ ಧಾಮಯುತವೀರ ನಂದ್ಯಾದಿ ಗೋತ್ರಾಧಿನಾಯಕರು, ದುರ್ದಾಂತವಾದ ॥। ಕಾಮಕಥೆಯನಳಿಕಿಸಿದ ಪ್ರಮಥಪುಂಗವರು । ಸೋಮಭೂಷನ ಸಭ್ಯವರಸಿದ್ಧಲಿಂಗನುರು ॥ ಭಾಮನೋರಮ ವಿಜಯದ ಜಯವಾಗಲಿರುವಂತೆ ಜಗದಿ ಕರುಣಿಸುಗೆ ॥। ೫೩ ॥।

ಹರಿಣಾಂಕ, ಮುನಿ, ವಸು, ಧರಾಂಕ ಶಾಲಿವಹನ್ನೃಪ । ನುರುಶಕ ವಿರೋಧಿ ವತ್ಸರ ಸುಖಶ್ರಾವಣದ ॥ ಕರಮೆಸೆವ ಶುಕ್ಲದೇಕಾದಶೀ ಶುಭತಿಥಿಯ ಗುರುವಾಸರದೊಳೆನ್ನಯ ॥। ವರಗುರು ಶ್ರೀಶಿವಾನಂದ ಜಗದಾಚಾರ್ಯ । ಶೇಖರನ ಕರುಣಾಕಟಾಕ್ಷದೊಲವಿಂದಲಿದು ॥ ಪರಿಪೂರ್ಣಮಾದುದುಜ್ಜಯಿನೀ ಮೃಗೇಂದ್ರಪೀಠದೊಡೆಯನ ಪುರಾಣವು ॥। ೫೪ ॥।

ಅರಸರೆಲ್ಲರು ಧರೆಯ ಜನರ ನೌರಸಸುತರ । ಪರಿಬಿಡದೆ ಕಾಪಾಡಲೀಶಧರ್ಮವನೊಸೆದು ॥ ನರರಿಗುಪದೇಶಿಸುವ ಗುರುವರರು ಕೀರ್ತಿಯಿಂ ರಂಜಿಸಲಿ ಭುವನದೊಳಗೆ ॥। ಸುರರಾಜನು ಸುವೃಷ್ಟಿಯಂ ಗರಿಯಲಿ ಧರಣಿಯು । ಪರಿಪರಿಯ ಬೆಳೆಯಿಂದ ಕಳೆಯೇರಿ ನಲಿಯಲುರೆ ॥ ಕೆರೆಕುಂಟೆ ಸರಿದಾದಿಸಲಿಲಾಶಯಗಳು ಜಲಭರದಿಂದ ತವೆ ತುಳುಕಲಿ ॥। ೫೫ ॥।

ವರಷಟಸ್ಥಲಬ್ರಹ್ಮ ತಾಪಸನು ಮಾಸಧಸ । ಗುರುಚನ್ನವೀರನು ಶಿವಾಚಾರ್ಯವಿಬುಧನನಿ ॥ ತರ ಸಾಧ್ಯಭಕ್ತಿಯಿಂ ಭುವನದ ಹಿತವನಪೇಕ್ಷಿಸಿ ಪೇಳಿಸಿದ ವರಜಗ ॥। ಸದ್ಗುರುವಿನ ಪುರಾಣವನನುಪಮಾನುರಾಗದಿಂ । ದಿರದೋದಿದವರಿಗೋದಿಸಿದವರಿಗೆ ತಿಳಿದಾ ॥ ಚರಿಸಿದವರಿಗೆ ಭವಕ್ಕೆ ಮರಳಿಬರಿಸದ ಪದವನ್ನೀಯಲಿ ಪರಶಿವನು ॥। ೫೬ ॥।

ವಸರುಚಿಹ ರಸವನಾಲಿಪ ರಸಿಕಶೇಖರರು । ನೆರೆಸವಿದು ಸುಧೆಯನುರೆ ಮರೆಯುವಂತೆ ಭುವನದಿ ॥ ಜಸವಾಂತುಭಯ ಸುಕನಿ ಜಗದೀಶ ಬುಧನಿಂ ರಚಿತವಾದ ಮಹಿಮಾಸ್ಪದ ॥। ನಸಮಜಗದಾಚಾರ್ಯ ಸಿದ್ಧಲಿಂಗನುರು ತಾ । ಪಸ ಜನರ ಮಕುಟಮಣಿಯ ಪುರಾಣವು ಕರಮಾ ॥ ಶಶಲಾಂಛನಾದಿತ್ಯವು ಮೆರೆಯಲಿ ಶಶಿಶೇಖರನ ಕೃಪೆಯಬಲದಿ ಜಗದಿ ॥। ೫೭ ॥।

ಮಂಗಲಮಯ ಚರಿತೆ ಚರಣವಿನತ ಜಂಗಮಾ । ಜಂಗಮೆ ಜರಾಮರಣದೂರೆ ದೂರ್ವಾಶ್ಯಾಮ ॥ ಲಾಂಗಬಂಧುರೆ ಸುಬಂಧೂಕ ಕುಸುಮಾರುಣಾಧರೆ ಧರಾಧರತನೂಜೆ ॥। ಗಂಗೋತ್ತಮಾಂಗನರ್ಧಾಂಗದೊಳಗಧಿಕೃತಾ । ಭಂಗುರತರ ಸುರಾಜ್ಯೆ ರಾಜಶೇಖರೆ ಸುಭಗೆ ॥ ಸಿಂಗದೇರವಳೆ ಸಬ್ಬಾಣಿ ಗೀರ್ವಾಣೀವಿನುತೆ ಗೌರಿಪೊರೆಯೆನ್ನನು ॥। ೫೮ ॥।

ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳೊಂಬತ್ತ
ನೆಯ ಸಂಧಿ ಪದಂ ೫೮ ಕ್ಕಂ
ಮಂಗಲಮಸ್ತು.

ಈ ಪುರಾಣದಲ್ಲಿ
ಒಟ್ಟು ಐದುನೂರಾಮೂವತ್ತೊಂಬತ್ತು (೫೩೯) ಪದ್ಯಗಳು.

ಸಮಾಪ್ತಂ.

ಅರಸರೆಲ್ಲರು ಧರೆಯ ಜನರ ನೌರಸಸುತರ । ಪರಿಬಿಡದೆ ಕಾ
ಪಾಡಲೀಶಧರ್ಮವನೊಸೆದು ॥ ನರರಿಗುಪದೇಶಿಸುವ ಗುರುವರರು
ಕೀರ್ತಿಯಿಂ ರಂಜಿಸಲಿ ಭುವನದೊಳಗೆ ||| ಸುರರಾಜನು ಸುವೃ
ಷ್ಟಿಯಂ ಗರಿಯಲಿ ಧರಣಿಯು । ಪರಿಪರಿಯ ಬೆಳೆಯಿಂದ ಕಳೆ
ಯೇರಿ ನಲಿಯಲುರೆ ॥ ಕೆರೆಕುಂಟೆ ಸರಿದಾದಿಸಲಿಲಾಶಯಗಳು ಜಲ
ಭರದಿಂದ ತವೆ ತುಳುಕಲಿ ||| ೫೫ |||

ವರಷಟಸ್ಥಲಬ್ರಹ್ಮ ತಾಪಸನು ಮಾನಧನ । ಗುರುಚನ್ನ
ವೀರನು ಶಿವಾಚಾರ್ಯವಿಬುಧನನಿ ॥ ತರ ಸಾಧ್ಯಭಕ್ತಿಯಿಂ ಭುವ
ನದ ಹಿತವನಪೇಕ್ಷಿಸಿ ಪೇಳಿಸಿದ ವರಜಗ ||| ದ್ಗುರುವಿನ ಪುರಾಣ
ವನನುಪಮಾನುರಾಗದಿಂ । ದಿರದೋದಿದವರಿಗೋದಿಸಿದವರಿಗೆ ತಿ
ಳಿದಾ ॥ ಚರಿಸಿದವರಿಗೆ ಭವಕ್ಕೆ ಮರಳಿಬರಿಸದ ಪದವನ್ನೀಯಲಿ
ಪರಶಿವನು ||| ೫೬ |||

ವಸರುತಿಹ ರಸವನಾಲಿಪ ರಸಿಕಶೇಖರರು । ನೆರೆಸನಿದು ಸು
ಧೆಯನುರೆ ಮೆರೆಯುವಂತೆ ಭುವನದಿ ॥ ಜಸವಾಂತುಭಯ ಸುಕವಿ
ಜಗದೀಶ ಬುಧನಿಂ ರಚಿತವಾದ ಮಹಿಮಾಸ್ಪದ ||| ನಸಮಜಗ
ದಾಚಾರ್ಯ ಸಿದ್ಧಲಿಂಗನುರು ತಾ । ಪಸ ಜನರ ಮಕುಟಮಣಿಯ
ಪುರಾಣವು ಕರಮಾ ॥ ಶಶಲಾಂಛನಾದಿತ್ಯವು ಮೆರೆಯಲಿ ಶಶಿಶೇಖ
ರನ ಕೃಪೆಯಬಲದಿ ಜಗದಿ ||| ೫೭ |||

ಮಂಗಲಮಯ ಚರಿತೆ ಚರಣವಿನತ ಜಂಗಮಾ । ಜಂಗಮೆ
ಜರಾಮರಣದೂರೆ ದೂರ್ವಾಶ್ಯಾಮ ॥ ಲಾಂಗಬಂಧುರೆ ಸುಬಂಧೂ
ಕ ಕುಸುಮಾರುಣಾಧರೆ ಧರಾಧರತನೂಜೆ ||| ಗಂಗೋತ್ತಮಾಂಗನ
ರ್ಧಾಂಗದೊಳಗಧಿಕೃತಾ । ಭಂಗುರತರ ಸುರಾಜ್ಯೆ ರಾಜಶೇಖರೆ
ಸುಭಗೆ ॥ ಸಿಂಗದೇರವಳೆ ಸಬ್ಬಾಣಿ ಗೀರ್ವಾಣೀವಿನುತೆ ಗೌರಿಪೊರೆ
ಯೆನ್ನನು ||| ೫೮ |||

ಇದು ಶ್ರೀ ಪರಶಿವ ಚರಣನಖಚಂದ್ರ ಚಂದ್ರಿಕಾಚಕೋರಾಯ
ಮಾಣೋಭಯ ಕವಿತಾಚತುರ ಸಾಹಿತ್ಯರತ್ನ ಕುಲಪತಿ
ನಾಲವಾರ ಜಗದೀಶ ಪಂಡಿತನಿಂ ವಿರಚಿತಮಪ್ಪ
ಶ್ರೀ ಸಿದ್ಧಲಿಂಗವಿಜಯ ಪುರಾಣದೊಳೊಂಬತ್ತ
ನೆಯ ಸಂಧಿ ಪದಂ ೫೮ ಕ್ಕಂ
ಮಂಗಲಮಸ್ತು.



ಈ ಪುರಾಣದಲ್ಲಿ
ಒಟ್ಟು ಐದುನೂರಾಮೂವತ್ತೊಂಬತ್ತು (೫೩೯) ಪದ್ಯಗಳು.

ಸಮಾಪ್ತಂ.

....॥ ಶ್ರೀ ರಸ್ತು ॥....

# ಶ್ರೀ ಗುರುಸ್ತುತಿ ತಾರಾವಳಿಯು

॥ ಕಂದ ॥

ಗುರುದೇವ ಗುರುವರೇಣ್ಯನೆ । ಗುರುರಾಜನೆ ಗುರುಮಹಾತ್ಮನೆ ಗುರುದಯಾಳೋ ॥
ಗುರುವೆ ಭವರೋಗವೈದ್ಯನೆ । ಗುರುವೆಂದಡಿಗೆರಗಿ ಬೇಡಿಕೊಂಬೆನು ಗುರುವೇ ॥೧॥

ಗುರುವರ ನಿನ್ನಡಿಗೆರಗಿದ । ಗಿರಿದೈ ದಡಿಗೈಯ್ಯನಂಜಿಕೆ ಯೆನಿತುಮರರೇ ॥
ಗುರುವೆ ಯವನಂಗಣದೊಳುರಿ । ಯಿರುವದು ಸಗ್ಗಿಗರಥೇನು ದೀನದಯಾಬ್ಧೀ ॥೨॥

ಗುರುವೆಂಬಕ್ಷರವೆರಡೈ । ನೆರೆ ನೆನೆಯುವ ನರಗಿಹಪೋಳ್ಪರದೋಳ್ ಬಿಡದೇ ॥
ಚಿರಸುಖವೀವುದು ಕಡಿಗೇ । ತಿರಮುಕುತಿಯನೀವುದೈ ಗುರುಗುಣಾತೀತಾ ॥೩॥

ಗುರುವೆ ಯಗನಿಗಂಣಿರಧಿಹ । ಹರನೈ ನೀನೆಲದೊಳ್ಳೈ ಮೊಗಗಳಿರದ ಮಹಾ ॥
ಪರಶಿವನೈ ಪರಿಭಾವಿಸೆ । ಗುರುವೇ ಪರಕಿಂತಪರನೆನುವದಾ ಶೃತಿಯೂ ॥೪॥

ನರನೊಳು ಶಿವಸಿಟ್ಟಾಗಿರು । ತಿರಲವನಂ ಪೊರೆವನೈ ಗುರುವಿರದೆ ಧರೆಯೋಳ್ ॥
ಗುರದೇವನಹಹ ಸಿಟ್ಟಾ । ಗಿರೆ ಹರನು ಕಾಯನದರಿಂದಧಿಕನು, ಗುರುವೈ ॥೫॥

ಗೂ ಯೆನೆ ಗೋಪತಿಕೇತುವಿ । ನಾಯುಸವಿಲ್ಲದೆ ಸಮಾನರೂಪವು ದೊರೆಗುಂ ॥
ರೂ ಯೆನೆ ನೀರೂಪದ ನಿ । ರ್ವಾಣಿಯ ನಿರಂಜನ ನಿಜಮುಕುತಿಯಪ್ಪುದು ರುತಂ ॥೬॥

ಗುರುರಾಯನ ನಾಮಾಮೃತ । ಸರಸರನೇ ಸವಿದು ಸವಿಯ ಪರವಶದಿಂದಂ ॥
ಅರರೆಬುಡಕೊನೆಯನರಿಯದೆ । ಗುರುವೇಗುರುವೇ ಯೆನುತಿರುವೆನೈಯ್ಯ ಗುರುವೇ ॥೭॥

ಮರೆದಾದರೊಮ್ಮೆ ಗುರುವಿನ । ಸರಸಾಗಿಹ ನಾಮವನ್ನು ನುಡಿಯುವ ನರನೋ ॥
ಳಿರುತಿಹ ದುರಿತವದೆಲ್ಲಂ । ಕರಗಲು ಕರ್ಪೂರದ ಪರಿಯು ನಿರವಯನಪ್ಪಂ ॥೮॥

ನೀನಲ್ಲದನ್ಯದೇಹಿಯು । ಮಾನವಗುರುಮುಕುತಿ ಕೊಡುವನೆಂಬುವ ವಚನಂ ॥
ಬಾನಲರಮುಡಿದ ಬಂಜೆಯು । ಮಾನಿತ ಮಗನೆಂಬುದಕೆಣೆಯಪ್ಪುದು ಗುರುವೇ ॥೯॥

ಗತಿನೀನೆಂದುರೆ ಶರಣಾ । ಗತದೇಹಿಯ ಬೆಳೆದಳಲನ್ನು ಕಳೆದು ಬಳಿಕಂ ॥
ಮತಿವಂತಗುರುವೆ ನೀನವ । ಗತಿಸಾರವೆನಿಪಮುಕುತಿಯ ನೀಯುವೆಗುರುವೇ ॥೧೦॥

ದುರಿತವನಧೂಮಕೇತುಂ । ದುರಿತಾವಲಿದಂತಿದಲನ ಕೇಸರಿ ಗುರುವುಂ ॥
ದುರಿತೌಘ ವಾಹಿನೀಪತಿ । ಗುರುತರ ಬಡಬಾನಲೋಪಮ ಶ್ರೀಗುರುವೂ ॥೧೧॥

ಗುರುವಿನೊಲುಪಕಾರಿಯು ಪರಿ । ಪರಿಯಿಂ ಪುಡಕಿದರಿಲ್ಲೆಲ್ಲಿಯು ನಂಬಿದನಂ ॥
ನರಭಾವವನುರಿಯಳುಕಿಸಿ । ಹರನಂ ಮಾಡುವಿ ಅದರಿಂ ಧರೆಯೊಳ್ಗುರುವೇ ॥೧೨॥

ಗುರುಕೃಪೆಯು ಮುಕ್ತಿಮೂಲಂ । ಗುರುವಚನಂ ನಿಖಿಲಮಂತ್ರಜಾಲಕೆ ಮೂಲಂ ॥
ಗುರುವುಂ ವಿಜ್ಞಾನಧನಂ । ಗುರುವುಂ ಕಾಲನಿಗೆ ಕಾಲನನುಪಮ ಮಹಿಮಂ ॥೧೩॥

ನಿರತಿಶಯ ಜ್ಞಾನಘನಂ । ನಿರವಯನೆನಿಸಿರ್ದ ನಿತ್ಯನಿರ್ಮಲ ಶಿವತಾಂ ॥
ನರನಿಕರವನುದ್ಧರಿಸಲು । ನೆರೆಧರಿಸಿದಂ ಗುರುರೂಪದಿಂ ಸಾವಯವಂ ॥೧೪॥

ಶ್ರೀಗುರುವೆಂದಡೆ ದುರಿತಂ । ಬೇಗನೆ ದೂರೋಡಿ ಕಾಣದಂತಾಗುವದೈ ॥
ಭೋಗವನೀಯುವ ಕರ್ಮದ । ಯೋಗವ ನೆರೆನೀಗೆ ನಿಜವನೋಡುವನವನೂ ॥೧೫॥

ಹೇಗೆ ಶಿವನ ಪ್ರಸಾದನು । ರಾಗದಿ ಸಂಸೇವ್ಯಮಪ್ಪುದ ಭವಭಜಕರಿಂ ॥
ಹಾಗೆ ಭವರೋಗನಾಶ । ಕ್ಕಾಗುವದೈ ಶ್ರೀಗುರು ಪ್ರಸಾದವು ಸೇವ್ಯಂ ॥೧೬॥

ಎಲ್ಲ ಮನುಜರ ಭುವನದೋ । ಳಿಲ್ಲಹ ಕರ್ಮಗಳ ಸಿದ್ಧಿಯಾಗಲು ಸತತಂ ॥
ಬಲ್ಲಿದ ಗುರುತಾಂ ಕಾರಣ । ನಲ್ಲದೊಡನ್ಯನೆನಿಸನದರಿಂ ಗುರುವಧಿಕಂ ॥೧೭॥

ಭವವಂ ದೂರೀಕರಿಸುವ । ಶಿವಜೀವರ ಭೇದಬುದ್ಧಿಯನೀವ ಗುರುವಂ ॥
ತವೆ ಹಸ್ತಪಾದ ಸಾಮ್ಯದಿ । ನವಹೇಳಿಸಲಾಗದೈ ಭುವಿಜೀವರೊಡನೇ ॥೧೮॥

ಶಿವನಾವನವನೆ ಗುರುವೈ । ತವೆಗುರುವಾದಾತನವನೆ ಶಿವನೈ ತಿಳಿಯಲ್ ॥
ಭವಗೆಲ್ಲಲಿಚ್ಛಿಪಾತನು । ಶಿವಗುರುಗಳಲ್ಲೆಣಿಸಲಾಗದು ಭೇದವನಂ ॥೧೯॥

ಗುರುವಿನಪಮಾನದಿಂದಂ । ಕರಗುವದೈ ಸಂಪದಾನೆ ನುಂಗಿದ ಫಲವೋಲ್ ॥
ಗುರುಪಾದಪೂಜೆಯಿಂದಂ । ದೊರೆಗುಂ ಸಿರಿಯಿರದೆ ತೆಂಗಿನೊಳು ಸೀನೀರೋಲ್ ॥೨೦॥

ಗುರುವಿನೊಳು ಬಕುತಿಯಿಲ್ಲದ । ನರನೋಳ್ ಶಿವಭಕ್ತಿ ಪುಟ್ಟದೈ ಯದರಿಂದಂ ॥
ಹರನಂತೆ ಧರೆಯೊಳನುದಿನ । ಗುರುಬಕುತಿಯನೆಸಗಿ ಪಡೆವುದೈ ಸ್ಥಿರಸುಖವಂ ॥೨೧॥

ಲೋಕದಿ ವಿಖ್ಯಾತನು ಗುರು । ಶೋಕದ ಸೋಂಕಿಲ್ಲದಾತನೈ ಗುರುದೇವಂ ॥
ಶ್ರೀಕರನೆನಿಸುವ ಗುರುವುಂ । ಭಾಕರ ಭವಕತಿಭೀಕರನು ಗುಣಾಕರನೈ ॥೨೨॥

ಅಧಿಕಂ ಶೃತಿತತಿಯುದಕಿಂ । ತಧಿಕಂ ಮಂತ್ರಂಗಳವುಕೆ ಪಂಚಾಕ್ಷರ ತಾ ॥
ನಧಿಕಂ ಪಂಚಾಕ್ಷರ ಕಿಂ । ತಧಿಕಂ ಗುರುವೆಂಬುವಕ್ಷರದ್ವಯಮಿಹದೋಳ್ ॥೨೩॥

ಮುಂಡಿಯ ನೇತಾಡಿಸುತಂ । ಕುಂಡಾಗ್ನಿಯ ಧೂಮನೀಂಟುತೆ ಗೆಯ್ಯುವ ಮಹೋ ॥
ದ್ದಂಡ ತಪಕಿಂತ ಗುರುಮಾ । ರ್ತಂಡನನುಂಡುಟ್ಟು ಸೇವಿಸಲು ಫಲವಧಿಕೈ ॥೨೪॥

ಅಗನಿಗಳ ನಾಲ್ಕರನಡುವೆ । ಮಿಗೆಸಂದಾಗಸವಣಿಯನನು ನೋಳ್ಪ ತಪಕಿಂ ॥
ತಗುರೆನಿಪ ಹೃದಾಕಾಶದಿ । ಪೊಗರುಗುವ ಗುರುದಿವಾಕರನಂ ನೋಡುವದೈ ॥೨೫॥

ಅಗನಿವೊಗದವರ ತರುವದು । ಬಗೆಗೊಗೆದುದನ್ನೆ ನೀಡುವದೈ ಬೇಡುವಗಂ ॥
ಜಗದಿ ಗುರುಸಾರ್ವಭೌಮನು । ಬಗೆನಿಲುಕವಮುತ್ತಗಣಿತವಂ ನೀಡುವನೈ ॥೨೬॥

ಎನ್ನಯ ತಂದೆಯು ಗುರುತಾ । ಮೆನ್ನಯ ಪೆತ್ತಂತ ತಾಯಿಗುರುವುಂ ಬಳಗಂ ॥
ಎನ್ನಯ ಕುಲಾಧಿದೇವತೆ । ಯೆನ್ನ ಶಿವಾನಂದ ಗುರುವರನೆ ಸೌಭಾಗ್ಯಂ ॥೨೭॥

ವರಚನ್ನವೀರನಪ್ಪಣೆ । ಶಿರವಿರಿಸುತೆ ಜಗದೀಶಬುಧನು ವಿರಚಿಸಿದೀ ॥
ಗುರುನುತಿ ತಾರಾವಳಿಯುಂ । ನೆರೆಪಠಿಸರ್ಗಕ್ಕು ಸಕಲಸಂಪನ್ನಿಕರಂ ॥೨೮॥



# — ಒಪ್ಪೋಲೆ —

..........

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೨ | ೧೨ | ಮುಕುತಿಯಸಿತ್ತ | ಮುಕುತಿಯನ್ನಿತ್ತ |
| ೩ | ೧೪ | ಶೃತಿ | ಶ್ರುತಿ |
| ೩ | ೨೪ | ಮನೆಯಪಕ್ಕೆ | ಮನೆಪಕ್ಕೆ |
| ೪ | ೨೦ | ಣಾಶ | ಣಾಶೆ |
| ೫ | ೧೦ | ಪೊಗಲಿ | ಪೊಗಲ |
| ೬ | ೪ | ತನೂ | ತನು |
| ೮ | ೫ | ನಳೆ | ನಳಿ |
| ೮ | ೧೫ | ಕಟಿಯವೋ | ಕಟಿಯವೊ |
| ೮ | ೧೦ | ಳಲ್ಲಿ | ಳಲ್ಲ |
| ೧೧ | ೨೨ | ತಳತಳವೆನಿಪ ||| | ತಳತಳ ||| |
| ೧೩ | ೧೦ | ಮದನಸು | ಮದನನಸು |
| ೧೫ | ೧೩ | ಪೋಲೇಂ | ಪೊಲೇಂ |
| ೧೬ | ೮ | ವಿಶೃತ | ವಿಶ್ರುತ |
| ೧೯ | ೨೧ | ಸುಘೇಯ | ಸುಘೆಯ |
| ೨೨ | ೮ | ವದಾ | ವಾ |
| ೨೩ | ೭ | ತೊರು | ತೋರು |
| ೨೫ | ೨೪ | ಮರಿಹೊ | ಮರಿವಹೊ |
| ೨೬ | ೩ | ಶೃತಿ | ಶ್ರುತಿ |
| ,, | ೪ | ಶೃತಿ | ಶ್ರುತಿ |
| ೨೯ | ೧ | ಮೂರನೆಯ | ಎರಡನೆಯ. |
| ೩೯ | ೧೩ | ನಾಲಿಸನೆ | ನಾಲಸನೆ |
| ೫೦ | ೪ | ಯತ್ನ | ಯತ್ಕ |

| | | | |
|---|---|---|---|
| ೫೦ | ೧೨ | ಯಸ್ತ್ರ | ಯಸ್ತು |
| ೫೧ | ೨೩ | ದುಂಖ | ದುಃಖ |
| ೫೨ | ೧೨ | ತೈತ್ತಿರಿಯ | ತೈತ್ತಿರೀಯ |
| ೫೩ | ೧೦ | ನೊಲು | ಯೊಲು |
| ೬೬ | ೧೫ | ವಂದ್ಯ | ವಂಧ್ಯ |
| ೬೭ | ೩ | ಗುರು | ಗನ |
| ೭೭ | ೧೮ | ಯಂದು | ಯೆಂದು |
| ೭೯ | ೧೮ | ಯಿರುವ | ಇರುವ |
| ೮೪ | ೫ | ದೆಲ್ಲಿ | ದಲ್ಲಿ |
| ೯೧ | ೧೨ | ಹೊರಟಿತು | ಹೊರಟರು |
| ೯೨ | ೨೩ | ನ್ಕಿಟ್ಟು | ನ್ಕಿಟ್ಟ |
| ೯೫ | ೬ | ಪಜ್ಜನದ | ಸಜ್ಜನದ |
| ೧೦೯ | ೨೧ | ಪಾಶಿ | ಪಾಶ |
| ೧೧೪ | ೨ | ಭಿದಾ | ಭಿಧಾ |
| ೧೧೪ | ೩ | ಥೇಯ | ಧೇಯ |
| ೧೧೫ | ೪ | ಶೃತ | ಶ್ರುತ |





# ಧರ್ಮವೀರ ರತ್ನಮಾಲೆಯಲ್ಲಿ ಪ್ರಕಟವಾಗಿರುವ ಗ್ರಂಥಗಳು.



| ರತ್ನಗಳು | ರೂ. ಆ. ಪೈ. |
|---|---|
| ೧ ಶ್ರೀ ಚನ್ನಬಸವ ವಿಜಯ | ೭—೦—೦ |
| ೨ ಶ್ರೀ ರೇಣುಕವಿಜಯ | ೧—೮—೦ |
| ೩ ಸುಪ್ರಬೋಧಾಗಮ | ೦—೮—೦ |
| ೪ ವೀರಶೈವಾಂಚಿಸ್ಥಿತಿ | ೦—೫—೦ |
| ೫ ರೇಣುಕಗೀತಾ ( ಕನ್ನಡ ) | ೧—೦—೦ |
| ೬ ಸಂಸ್ಕೃತ ಪ್ರಾರಸ್ತ್ರ ( ಕನ್ನಡ ) | ೦—೩—೦ |
| ೭ ಸಂಕ್ಷಿಪ್ತ ವೈದಿಕ ಶಿವಪೂಜಾವಿಧಿ | ೦—೪—೦ |
| ೮ ಮರುಳಸಿದ್ಧ ಕಿಶಿ ಜನ ? | ೦—೮—೦ |
| ೯ ಶ್ರೈ\|\| ಶ್ರೀ ೧೦೦೮ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳ ಚಾರಿತ್ರ್ಯದಮೇಲೆ ನಿಬಂಧ | ೦—೪—೦ |
| ೧೦ ಶ್ರೀ ರುದ್ರಾಧ್ಯಾಯ | ೦—೨—೦ |
| ೧೧ ಶ್ರೀ ವೇದಸ್ತೋತ್ರಾವಳಿಃ | ೦—೪—೦ |
| ೧೨ ಶ್ರೀ ಜಗದ್ಗುರು ಸಿದ್ಧಲಿಂಗವಿಜಯ ಪುರಾಣವು | ೩—೦—೦ |
| ೧೩ ವೇದೋಕ್ತ ಶಿವಪೂಜಾವಿಧಿ | ೩—೦—೦ |

ಪುಸ್ತಕ ದೊರೆಯುವ ವಿಳಾಸ:-

ಅಧ್ಯಕ್ಷರು
**ಶ್ರೀಮದ್ವೀರಶೈವ ಗುರುಕುಲಂ**
೯೧೬, ಉತ್ತರ ಕಸಬಾ, ಸೊಲ್ಲಾಪುರ.

---

ಮುದ್ರಕರು-
**ಶ್ರೀ ಶಂಕರಾನಂದ ಮುದ್ರಣಾಲಯ, ಯಾದಗಿರಿ.**